CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೧, ೨೦೦೩ (ಭಾದ್ರಪದ ೨೦ ಶಕ ವರ್ಷ ೧೯೨೫) | ಸಂಚಿಕೆ ೩೭

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು

(ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಸೆಕ್ಷನ್ 3 (ಬಿ) (1) ಮತ್ತು 2ರ ಪ್ರಕಾರ ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ನಿಯಮ (3) ರ ಅಡಿಯಲ್ಲಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಗೆ ಸಂಬಂಧಪಟ್ಟ ಕ್ರಿಯೆ ಹಾಗೂ ಕರ್ತವ್ಯಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಿದೆ)

**ಅಧಿಸೂಚನೆ ಸಂಖ್ಯೆ: ಸೈಕಪು೯: ಸಿಬ್ಬಂದಿ: ಮಾಹಅ: 2003 ದಿನಾಂಕ: 21ನೇ ಆಗಸ್ಟ್ 2003**

ಅಧಿಸೂಚನೆ ಸಂಖ್ಯೆ: ಸೈಕಪು೯/ ಸಿಬ್ಬಂದಿ/ ಮಾಹ/2000/2002 ದಿನಾಂಕ: 27.9.2002ನ್ನು ರದ್ದು ಪಡಿಸಿ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ರ ಪ್ರಕಾರ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಸಾರ್ವಜನಿಕ, ಸಕ್ಷಮ ಮತ್ತು ಅಪೀಲು ಪ್ರಾಧಿಕಾರಗಳು ಈ ಕೆಳಗಿನಂತಿವೆ:

**ಸಾರ್ವಜನಿಕ ಪ್ರಾಧಿಕಾರ**

ಜಂಟಿ ನಿರ್ದೇಶಕರು, ಬೆಂಗಳೂರು (ನಗರ)
ಜಂಟಿ ನಿರ್ದೇಶಕರು, ಬೆಳಗಾವಿ
ಜಂಟಿ ನಿರ್ದೇಶಕರು, ವಿಜಾಪೂರ
ಜಂಟಿ ನಿರ್ದೇಶಕರು, ಮಡಿಕೇರಿ
ಉಪ ನಿರ್ದೇಶಕರು, ಗುಲಬರ್ಗಾ
ಉಪ ನಿರ್ದೇಶಕರು ಧಾರವಾಡ
ಉಪ ನಿರ್ದೇಶಕರು, ಕಾರವಾರ
ಉಪ ನಿರ್ದೇಶಕರು, ಶಿವಮೊಗ್ಗ
ಉಪ ನಿರ್ದೇಶಕರು, ಮಂಗಳೂರು
ಉಪ ನಿರ್ದೇಶಕರು, ಮೈಸೂರು
ಉಪ ನಿರ್ದೇಶಕರು, ಬೆಂಗಳೂರು (ಗ್ರಾಮಾಂತರ)

**ಸಕ್ಷಮ ಪ್ರಾಧಿಕಾರ**

ಜಂಟಿ ನಿರ್ದೇಶಕರು, ಬೆಂಗಳೂರು (ನಗರ)
ಉಪ ನಿರ್ದೇಶಕರು, (ಕೇಂದ್ರ ಸ್ಥಾನ)

**ಅಪೀಲು ಪ್ರಾಧಿಕಾರ** ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ

ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ರ ಸೆಕ್ಷನ್ 3 (ಬಿ) (1) (2) ನಿಯಮ 3 ರ ಅಡಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಕ್ರಿಯೆ ಮತ್ತು ಕರ್ತವ್ಯಗಳನ್ನು ಈ ಕೆಳಕಂಡಂತೆ ಪ್ರಕಟಿಸಿದೆ:

**ನಿರ್ದೇಶಕರ ಕರ್ತವ್ಯಗಳು**

ನಿರ್ದೇಶನಾಲಯದ ಯಶಸ್ವಿ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿದ್ದು ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಹಾಗೂ ಸೇವಾ ನಿರತ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧಿಸಿದ ವಿಷಯಗಳಿಗೆ ಇವರು ರಾಜ್ಯ ಸರ್ಕಾರದ ಮತ್ತು ಪುನರ್ವಸತಿ ಮಹಾನಿರ್ದೇಶಕರ ಪ್ರತಿನಿಧಿಗಳಾಗಿರುವರು. ಈ ಪಾತ್ರವನ್ನು ನಿಭಾಯಿಸಲು ಅವರಿಗೆ ಈ ಕೆಳಗಿನ ಜವಾಬ್ದಾರಿಗಳನ್ನು ವಹಿಸಲಾಗಿದೆ.

1. ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಹಾಗೂ ಸೇವಾನಿರತ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿ ಸಂಬಂಧದಲ್ಲಿ ಸರ್ಕಾರದ ವಿವಿಧ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರುಗಳು, ಪುನರ್ವಸತಿ ಮಹಾನಿರ್ದೇಶಕರು ಮತ್ತು ಮಿಲಿಟರಿ

ಯುನಿಟ್‌ಗಳೊಂದಿಗೆ ನಿಕಟ ಸಂಪರ್ಕ ಏರ್ಪಡಿಸಿಕೊಳ್ಳುವುದು. ಇದಲ್ಲದೆ ಮಾಜಿ ಸೈನಿಕರಿಗೆ ಉದ್ಯೋಗ ಮತ್ತು ಸ್ವಯಂ ಉದ್ಯೋಗ ಕಲ್ಪಿಸುವ ದೃಷ್ಟಿಯಿಂದ ಸಾರ್ವಜನಿಕ ಉದ್ಯಮಗಳು, ಹಣಕಾಸು ಸಂಸ್ಥೆಗಳು ಮತ್ತು ಪ್ರತಿಷ್ಠಿತ ಉದ್ಯೋಗಪತಿಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಮಾಜಿ ಸೈನಿಕರ ಪುನರ್ವಸತಿ ಸಾಧಿಸುವುದು.

2. ಮಾಜಿ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧ ಕೇಂದ್ರ ಸರ್ಕಾರ ಹೊರಡಿಸಿರುವ ಹಲವಾರು ನಿಯಮ/ ಆದೇಶಗಳನ್ನು ರಾಜ್ಯ ಸರ್ಕಾರದಿಂದ ಸಮರ್ಪಕ ಅನುಷ್ಠಾನದ ಜವಾಬ್ದಾರಿ. ಈ ನಿಯಮಗಳಿಗೆ ಸಂದರ್ಭಾನುಸಾರ ತಿದ್ದುಪಡಿಯ ಅವಶ್ಯಕತೆ ಇದ್ದಲ್ಲಿ ಅದನ್ನು ಪುನರ್ ವಿಮರ್ಷೆಗಾಗಿ ಪುನರ್ವಸತಿ ಮಹಾನಿರ್ದೇಶಕರು, ಕೇಂದ್ರಿಯ ಸೈನಿಕ ಮಂಡಳಿ ಮತ್ತು ರಾಜ್ಯ ಸರ್ಕಾರದ ಗಮನಕ್ಕೆ ತರುವುದು.
3. ರಾಜ್ಯದ ಸೈನಿಕ ಮಂಡಳಿಗಳ ಕೆಲಸಗಳಲ್ಲಿ ಸಮನ್ವಯತೆ ಹಾಗೂ ಪ್ರಕರಣದ ಆದ್ಯತೆಯ ಮೇರೆಗೆ ಸೂಕ್ತ ಕ್ರಮ ಕೈಗೊಳ್ಳಲು ನಿರ್ದೇಶನ ನೀಡುವುದು.
4. ನಿಯತಕಾಲಿಕವಾಗಿ ವಿಚಾರ ಸಂಕೀರ್ಣಗಳು ಮತ್ತು ಸಮ್ಮೇಳನಗಳನ್ನು ಏರ್ಪಡಿಸಿ ಸಾರ್ವಜನಿಕರಲ್ಲಿ ರಕ್ಷಣಾ ಪಡೆಗಳ ಬಗ್ಗೆ ಅರಿವು ಮೂಡಿಸುವುದು. ಮಾಜಿ ಸೈನಿಕರ ಉದ್ಯೋಗ ಮೀಸಲಾತಿ ಬಗ್ಗೆ ಸಾರ್ವಜನಿಕ ಉದ್ಯಮಗಳು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಹ ವಿಚಾರ ಸಂಕೀರ್ಣಗಳನ್ನು ಏರ್ಪಡಿಸಿ ಅರಿವು ಮೂಡಿಸುವುದು. ಇದಲ್ಲದೆ ಮಾಜಿ ಸೈನಿಕರ ಪುನರ್ವಸತಿಯು ಒಂದು ಸಾಮಾಜಿಕ ಜವಾಬ್ದಾರಿ ಎಂದು ಪ್ರಮುಖ ಖಾಸಗಿ ಉದ್ಯಮಗಳು, ಉದ್ಯೋಗಪತಿಗಳು, ಉತ್ಪಾದನಾ ಹಾಗೂ ಇತರ ಸಂಘ ಸಂಸ್ಥೆಗಳಲ್ಲಿ ಅರಿವು ಮೂಡಿಸುವುದು.
5. ಕರ್ನಾಟಕ ಹಣಕಾಸು ಸಂಸ್ಥೆ, ಬ್ಯಾಂಕುಗಳು ಮತ್ತು ಇತರ ಖಾಸಗಿ ತರಬೇತಿ ಸಂಸ್ಥೆಗಳ ಸಹಯೋಗದಿಂದ ಮಾಜಿ ಸೈನಿಕರಿಗೆ ವೃತ್ತಿಪರ ತರಭೇತಿ ಶಿಬಿರಗಳನ್ನು ಏರ್ಪಡಿಸುವುದು.
6. ಕೇಂದ್ರ ಸರ್ಕಾರ, ಪುನರ್ವಸತಿ ಮಹಾ ನಿರ್ದೇಶಕರು ಮತ್ತು ರಾಜ್ಯ ಸರ್ಕಾರಗಳು ಮಾಜಿ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧಿಸಿದ ಕಾರ್ಯಯೋಜನೆಗಳ ಬಗ್ಗೆ ವ್ಯಾಪಕ ಪ್ರಚಾರ ಮತ್ತು ಅನುಷ್ಠಾನ. ಸ್ವಯಂ ಉದ್ಯೋಗದ (ಸೆಂಫೆಕ್ಸ್‌ದಂತಹ ಕಾರ್ಯ ಯೋಜನೆಗಳ) ಲಾಭವನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ಪಡೆದುಕೊಳ್ಳುವ ನಿಟ್ಟಿನಲ್ಲಿ ಲಭ್ಯವಿರುವ ಎಲ್ಲ ಕ್ರಮಗಳನ್ನು ಜರುಗಿಸುವುದು.

ಮೇಲಿನವುಗಳಲ್ಲದೆ ಇಲಾಖಾ ಮುಖ್ಯಸ್ಥರಿಗೆ ದತ್ತವಾದ ಅಧಿಕಾರದೊಂದಿಗೆ ಈ ಕೆಳಗಿನ ಕರ್ತವ್ಯಗಳನ್ನು ಸಹ ನಿಭಾಯಿಸುವುದು.

1. ಪದನಿಮಿತ್ತ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯ ಕಾರ್ಯದರ್ಶಿಯಾಗಿ ಮಂಡಳಿಯ ನಿಯಮಗಳ ಪ್ರಕಾರ ಸಭೆಯನ್ನು ಏರ್ಪಡಿಸುವುದು.
2. ರಾಜ್ಯ ಸರ್ಕಾರದ ಕಲ್ಯಾಣ ನಿಧಿ ನಿಯಮಗಳ ಪ್ರಕಾರ ಕರ್ನಾಟಕ ರಾಜ್ಯ ಮಾಜಿ ಸೈನಿಕರ ಕಲ್ಯಾಣ ನಿಧಿಯಿಂದ ಜಾರಿಗೊಳಿಸಲಾಗಿರುವ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವುದು ಮತ್ತು ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
3. ಪದನಿಮಿತ್ತ ವಿಶೇಷ ನಿಧಿಯ ಕಾರ್ಯದರ್ಶಿಯಾಗಿ ವಿಶೇಷ ನಿಧಿಯಿಂದ ಜಾರಿಗೊಳಿಸಲಾಗಿರುವ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದು ಮತ್ತು ಸಭೆ ಏರ್ಪಡಿಸುವುದು ಹಾಗೂ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
4. ಪದನಿಮಿತ್ತ ರಾಜ್ಯಪಾಲರ ರಕ್ಷಣಾ ನಿಧಿಯ ಕಾರ್ಯದರ್ಶಿಯಾಗಿ ರಾಜ್ಯಪಾಲರ ರಕ್ಷಣಾ ನಿಧಿಯ ಸದ್ಬಳಕೆ ಮತ್ತು ಸಭೆ ಏರ್ಪಡಿಸುವುದು ಹಾಗೂ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
5. ಪದನಿಮಿತ್ತ ಸಶಸ್ತ್ರ ಪಡೆಗಳ ಧ್ವಜ ದಿನಾಚರಣೆ ಸ್ಥಾಯಿ ಸಲಹಾ ಸಮಿತಿ ಸಭೆಯ ಕಾರ್ಯದರ್ಶಿಯಾಗಿ ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು. ಕೇಂದ್ರಿಯ ಸೈನಿಕ ಮಂಡಳಿ, ನವದೆಹಲಿ ಮತ್ತು ಸಮಿತಿಯ ಮಾರ್ಗದರ್ಶಿಗಳನುಸಾರ ಧ್ವಜ ನಿಧಿ ಸಂಗ್ರಹಣೆಯನ್ನು ಹೆಚ್ಚಿಸಲು ಕ್ರಮ ಕೈಕೊಳ್ಳುವುದು. ಇದಲ್ಲದೆ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿದ್ದಾರೆ.
6. ಅಂಗವಿಕಲ ಮಾಜಿ ಸೈನಿಕರು, ವಿಶಿಷ್ಟ ವೃತ್ತಿನಿರತ ಯೋಧರು ಅಂದರೆ ಕಮಾಂಡೋ, ಬಾಂಬ್ ಪರಿಣಿತರು ಶ್ವಾನ, ತರಬೇತಿದಾರರು, ಭಾರಿ ವಾಹನ ಚಾಲಕರು ಮತ್ತು ವಿಶೇಷ ಸಾಧನ ಸಾಮಗ್ರಿ ನಿರ್ವಾಹಕರುಗಳ ಹೆಸರುಗಳನ್ನು ಉದ್ಯೋಗಕ್ಕಾಗಿ ನೋಂದಾಯಿಸುವುದು ಮತ್ತು ಆದ್ಯತೆ ಮೇರೆಗೆ ಪುರಸ್ಕರಿಸುವುದು.
7. ಯಾವುದೇ ಒಂದು ಜಿಲ್ಲಾ ಕಾರ್ಯಾಲಯದಲ್ಲಿ ನಿರ್ದಿಷ್ಟ ಪ್ರವರ್ಗದ ಮಾಜಿ ಸೈನಿಕರು ಲಭ್ಯವಿಲ್ಲದಿದ್ದಲ್ಲಿ ಅಂತಹ ಬೇಡಿಕೆಗಳನ್ನು ಪೂರೈಸಲು ರಾಜ್ಯದ ಎಲ್ಲಾ ಜಂಟಿ ಮತ್ತು ಉಪ ನಿರ್ದೇಶಕರಿಗೆ ಸುತ್ತೋಲೆ ನೀಡುವುದು. ಇದರಿಂದ ಮಾಜಿ ಸೈನಿಕರಿಗೆ ಉದ್ಯೋಗವಕಾಶ ಒದಗಿಸಿ ಸಂಪನ್ಮೂಲವನ್ನು ಗರಿಷ್ಠವಾಗಿ ಅನುಷ್ಠಾನಗೊಳಿಸುವುದು.
8. ಮಾಜಿ ಸೈನಿಕರ ಲಭ್ಯತೆ ಇಲ್ಲದ ಪ್ರಮಾಣ ಪತ್ರವನ್ನು ನೀಡುವ ಪ್ರಾಧಿಕಾರವನ್ನು ಕೇವಲ ನಿರ್ದೇಶನಾಲಯದಿಂದ ನೀಡುವ ಜವಾಬ್ದಾರಿ.

**ಉಪ ನಿರ್ದೇಶಕರು (ಕೇಂದ್ರ ಸ್ಥಾನ) ಇವರ ಕರ್ತವ್ಯಗಳು**

1. ನಿರ್ದೇಶಕರಿಗೆ ಸೂಕ್ತ ಸಲಹೆ ನೀಡುವುದು ಹಾಗೂ ನಿರ್ದೇಶನಾಲಯದ ಕೆಲಸ ಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವುದು ಮತ್ತು ನಿರ್ದೇಶಕರಿಂದ ಸೂಚಿತವಾದ ಕರ್ತವ್ಯಗಳನ್ನು ನಿರ್ವಹಿಸುವುದು.
2. ನಿರ್ದೇಶಕರು ಕೇಂದ್ರ ಸ್ಥಾನದಿಂದ ದೂರವಿರುವ ಸಂದರ್ಭಗಳಲ್ಲಿ ನಿರ್ದೇಶನಾಲಯದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ನಿರ್ದೇಶಕರು ವಾಪಸಾದ ನಂತರ ನಿರ್ದೇಶನಾಲಯದ ಪ್ರಮುಖ ಆಗು ಹೋಗುಗಳ ಬಗ್ಗೆ ವರದಿ ಸಲ್ಲಿಸುವುದು.

3. ನಿರ್ದೇಶನಾಲಯದ ಸಿಬ್ಬಂದಿ ವರ್ಗದವರ ಮೇಲ್ವಿಚಾರಣೆ ಮತ್ತು ಕಾಗದ ಪತ್ರಗಳನ್ನು ನಿರ್ದೇಶಕರಿಗೆ ಮಂಡಿಸುವ ಮುನ್ನ ಪರಿಶೀಲಿಸುವುದು.
4. ನಿರ್ದೇಶನಾಲಯದ ವರ್ಗೀಕೃತ ಪತ್ರ ವ್ಯವಹಾರವನ್ನು ಖುದ್ದಾಗಿ ನಿರ್ವಹಿಸುವುದು.
5. ಬಹಳ ದಿನಗಳಿಂದ ವಿಲೇ ಆಗದ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಗೊಳಿಸಲು ವೈಯಕ್ತಿಕ ಗಮನ ಹರಿಸಿ ಎಲ್ಲಾ ವಿಭಾಗಗಳಿಂದ ವರದಿಗಳನ್ನು ಪರಿಶೀಲಿಸುವುದು.
6. ನಿರ್ದೇಶಕರ ಪೂರ್ವಾನ್ಮತಿ ಪಡೆದು ಸಾಮಾನ್ಯ ಪತ್ರ ವ್ಯವಹಾರವನ್ನು ನಿರ್ದೇಶಕರ ಪರವಾಗಿ ಜರುಗಿಸುವುದು.
7. ಕಾರ್ಯಾಲಯಕ್ಕೆ ಅವಶ್ಯವಿರುವ ಪಿಠೋಪಕರಣಗಳನ್ನು, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಕಛೇರಿ ವೆಚ್ಚದಿಂದ ಖರೀದಿಸಲು ನಿರ್ದೇಶಕರಿಗೆ ಸೂಕ್ತ ಪ್ರಸ್ತಾವನೆಯನ್ನು ಮಂಡಿಸುವುದು.
8. ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳ ಪ್ರಶ್ನೆಗಳಿಗೆ ತ್ವರಿತವಾಗಿ ಸಮಂಜಸ ಉತ್ತರವನ್ನು ನೀಡುವ ಬಗ್ಗೆ ಮೇಲ್ವಿಚಾರಣೆ.
9. ನಿರ್ದೇಶನಾಲಯದ ವರ್ಗ 'ಬಿ' ಮತ್ತು 'ಸಿ' ಸಿಬ್ಬಂದಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಹಾಗೂ ರಜೆ, ವೇತನ ಮತ್ತು ಭತ್ಯೆ ಇತ್ಯಾದಿ ಹಾಗೂ ಸ್ಥಳೀಯ ಆಡಳಿತ ನಿರ್ವಹಣೆ.

**ಜಂಟಿ ಮತ್ತು ಉಪ ನಿರ್ದೇಶಕರುಗಳ ಕರ್ತವ್ಯಗಳು**

ಜಿಲ್ಲಾ ಮಟ್ಟದ ಕಾರ್ಯಾಲಯ ಹಾಗೂ ಅಲ್ಲಿರುವ ಇತರ ಸಂಸ್ಥೆಗಳ ಸುಗಮ ಕಾರ್ಯನಿರ್ವಹಣೆಗೆ ಇವರು ಜವಾಬ್ದಾರರು. ಇವರು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಸೈನಿಕ ಮಂಡಳಿಯ ಪದನಿಮಿತ್ತ ಕಾರ್ಯದರ್ಶಿಗಳಾಗಿರುತ್ತಾರೆ. ಮಾಜಿ ಸೈನಿಕರ ಉದ್ಯೋಗ, ಸ್ವಯಂ ಉದ್ಯೋಗ ಮತ್ತು ಸೇವಾನಿರತ ಯೋಧರ ಕಲ್ಯಾಣ ಯೋಜನೆಗಳ ಅನುಷ್ಠಾನ ಇವು ಇವರ ಪ್ರಮುಖ ಜವಾಬ್ದಾರಿಗಳಾಗಿರುತ್ತವೆ. ಉಳಿದಂತೆ.

1. ಕಾರ್ಯಾಲಯದ ಕರ್ತವ್ಯಗಳ ವಿಭಜನೆ ಮತ್ತು ಸಿಬ್ಬಂದಿ ವರ್ಗಕ್ಕೆ ಸಮರ್ಪಕ ಕಾರ್ಯವಿತರಣೆ ಹಾಗೂ ನಿರ್ದೇಶನಾಲಯದ ಸೂಚನೆಗಳ ಯಶಸ್ವಿ ಅನುಷ್ಠಾನ.
2. ಕಾಲ ಕಾಲಕ್ಕೆ ಸಿಬ್ಬಂದಿ ವರ್ಗದವರ ಕಾರ್ಯಕ್ಷಮತೆಯನ್ನು ಪರಾಮರ್ಶಿಸಿ ಅವರಿಗೆ ಕರ್ತವ್ಯ ನಿರ್ವಹಣೆಯಲ್ಲಿ ಮಾರ್ಗದರ್ಶನ ನೀಡುವುದು.
3. ಕಾರ್ಯಾಲಯದಿಂದ ಮಾಹಿತಿ ಬಯಸುವ ಪತ್ರ ವ್ಯವಹಾರಗಳಿಗೆ ತ್ವರಿತವಾಗಿ ಸ್ಪಂದಿಸುವುದು. ಇದಕ್ಕಾಗಿ ಗ್ರಂಥಾಲಯ ನಿರ್ವಹಣೆ ಮತ್ತು ಸೂಚನಾ ಫಲಕಗಳಲ್ಲಿ ಉಪಯುಕ್ತ ಮಾಹಿತಿಯನ್ನು ಸಂದರ್ಶಕರ ಉಪಯೋಗಕ್ಕಾಗಿ ಬಿತ್ತರಿಸುವುದು.
4. ಕಾರ್ಯಾಲಯದ ವರ್ಗೀಕೃತ ಪತ್ರ ವ್ಯವಹಾರವನ್ನು ಖುದ್ದಾಗಿ ನಿರ್ವಹಿಸುವುದು ಮತ್ತು ಸಿಬ್ಬಂದಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಯನ್ನು ವಸ್ತು ನಿಷ್ಠವಾಗಿ ತಯಾರಿಸುವುದು.
5. ಸಶಸ್ತ್ರ ಪಡೆಗಳ ಬಗ್ಗೆ ಜನ ಸಾಮಾನ್ಯರಲ್ಲಿ ಅರಿವು ಮೂಡಿಸುವುದು ಮತ್ತು ಮಾಜಿ ಸೈನಿಕರ ಸಮ್ಮೇಳನಗಳನ್ನು ನಡೆಸುವುದು.
6. ಅಭಿಲೇಖ ಕಾರ್ಯಾಲಯಗಳು ಕೋರಿದಾಗ ಸತ್ಯಾಪಣೆ ಕೈಗೊಳ್ಳುವುದು ಮತ್ತು ಮಾಜಿ ಸೈನಿಕರ ಪಿಂಚಣಿ ಮತ್ತು ಇನ್ನಿತರ ವಿಷಯಗಳಿಗೆ ಸಂಬಂಧಿಸಿದಂತೆ ದೃಢೀಕರಣ.

**ಮೇಲೆ ತಿಳಿಸಿದ ಕೆಲಸಗಳಲ್ಲದೆ ಈ ಕೆಳಕಂಡ ಕರ್ತವ್ಯಗಳನ್ನು ಸಹ ನಿಭಾಯಿಸತಕ್ಕದ್ದು.**

1. ಪದನಿಮಿತ್ತ ಜಿಲ್ಲಾ ಸೈನಿಕ ಮಂಡಳಿಯ ಕಾರ್ಯದರ್ಶಿಯಾಗಿ ನಿಯತಕಾಲಿಕವಾಗಿ ಸಭೆಯನ್ನು ಏರ್ಪಡಿಸುವುದು.
2. ಆಯವ್ಯಯ ಲೆಕ್ಕ ಪತ್ರಗಳಲ್ಲದೆ ಕಲ್ಯಾಣ ನಿಧಿ, ವಿಶೇಷ ನಿಧಿ ಮತ್ತು ಧ್ವಜ ನಿಧಿ ಲೆಕ್ಕ ಪತ್ರದ ನಿರ್ವಹಣೆ.
3. ಸೈನಿಕ ವಿಶ್ರಾಂತಿ ಗೃಹದ ಪರೀವಿಕ್ಷಣೆ ಮತ್ತು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ನಿರ್ದೇಶನಾಲಯಕ್ಕೆ ವರದಿ ಸಲ್ಲಿಸುವುದು.
4. ಮಿಲಿಟರಿ ವಿದ್ಯಾರ್ಥಿ ನಿಲಯದ ಸಮಗ್ರ ನಿರ್ವಹಣೆ ಹಾಗೂ ಉತ್ತಮ ಕಾರ್ಯನಿರ್ವಹಣೆಗಾಗಿ ಸೂಕ್ತ ಸಲಹೆ ನೀಡುವುದು.
5. ನಿಲಯಾರ್ಥಿಗಳಿಗೆ ಸ್ವಚ್ಛ ಹಾಗೂ ಸ್ವಾದಿಷ್ಠ ಊಟೋಪಚಾರದ ವ್ಯವಸ್ಥೆ ಹಾಗೂ ಸಾಂಕ್ರಾಮಿಕ ರೋಗಗಳು ಬಾರದಂತೆ ತಡೆಗಟ್ಟಲು 3 ತಿಂಗಳಿಗೊಮ್ಮೆ ವೈದ್ಯಕೀಯ ತಪಾಸಣೆ ಏರ್ಪಡಿಸುವುದು.
6. ಕಾರ್ಯವ್ಯಾಪ್ತಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರ ಸ್ಥಾನಗಳಿಗೆ ಭೇಟಿ ನೀಡುವುದು. ಒಂದಕ್ಕಿಂತ ಹೆಚ್ಚು ಕಾರ್ಯವ್ಯಾಪ್ತಿ ಜಿಲ್ಲೆಗಳಿದ್ದಲ್ಲಿ, ಪ್ರತಿ ಜಿಲ್ಲೆಗೂ 2 ತಿಂಗಳಿಗೊಮ್ಮೆಯಾದರೂ ಭೇಟಿ ನೀಡುವುದು.
7. ಸಮೂಹ ಮಾಧ್ಯಮದಲ್ಲಿ ಪ್ರವಾಸದ ಬಗ್ಗೆ ಪೂರ್ವಭಾವಿಯಾಗಿ ಪ್ರಚಾರ ನೀಡುವುದು. ಪ್ರವಾಸ ಕೈಗೊಂಡ ಮಾಸಿಕ ವರದಿಯನ್ನು ಮುಂದಿನ ತಿಂಗಳ 15ನೇ ತಾರೀಖಿನೊಳಗೆ ನಿರ್ದೇಶನಾಲಯಕ್ಕೆ ಸಲ್ಲಿಸುವುದು.
8. ಮಾಜಿ ಸೈನಿಕರಿಗೆ, ಯುದ್ಧ ಸಂತ್ರಸ್ತರಿಗೆ, ಮತ್ತು ಅವರ ಅವಲಂಬಿತರಿಗೆ ಉದ್ಯೋಗ ಮತ್ತು ಸ್ವಯಂ ಉದ್ಯೋಗ ಒದಗಿಸಿ ಕೊಡಲು ಸ್ಥಳೀಯ ಉದ್ಯೋಗಪತಿಗಳೊಂದಿಗೆ ಮತ್ತು ಪ್ರತಿಷ್ಠಿತ ಉದ್ಯೋಗದಾತರೊಂದಿಗೆ ಸಮನ್ವಯ ಸಾಧಿಸಿ ಉದ್ಯೋಗವಕಾಶ ಕಲ್ಪಿಸುವುದು.
9. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಸ್ಥಳೀಯ ವ್ಯವಸ್ಥಾಪಕರು, ಜಿಲ್ಲಾ ಔದ್ಯೋಗಿಕ ಕೇಂದ್ರ ಮುಂತಾದ ಸಂಸ್ಥೆಗಳೊಂದಿಗೆ ಸಂಪರ್ಕ ಇಟ್ಟುಕೊಂಡು ಮಾಜಿ ಸೈನಿಕರಿಗೆ ಸ್ವಯಂ ಉದ್ಯೋಗ ಕಲ್ಪಿಸಲು ನಿರ್ದೇಶಕರ ಸೂಚನೆಯಂತೆ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುವುದು.
10. ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಕಲ್ಯಾಣಕ್ಕಾಗಿ ಸೂಕ್ತ ನೆರವು ಪಡೆಯಲು ಜಿಲ್ಲಾಧಿಕಾರಿಗಳು ಮತ್ತು ಪೊಲೀಸ್ ಅಧೀಕ್ಷಕರೊಂದಿಗೆ ಉತ್ತಮ ಆತ್ಮೀಯ ಸಂಬಂಧ ಇರಿಸಿಕೊಳ್ಳುವುದು.

11. ಕಛೇರಿ ಕೈಪಿಡಿಯಲ್ಲಿ ನೀಡಿರುವ ಸೂಚನೆಯಂತೆ ಕಾಲ ಕಾಲಕ್ಕೆ ಕಡತಗಳು ಮತ್ತು ಇನ್ನಿತರ ಅನುಪಯುಕ್ತ ದಾಖಲಾತಿಗಳನ್ನು ನಾಶ ಮಾಡುವುದು.
12. ಮಾಜಿ ಸೈನಿಕರಿಗೆ ಸ್ನೇಹಿತನಾಗಿ, ಮಾರ್ಗದರ್ಶಕನಾಗಿ ಮತ್ತು ಭೋಧಕನಾಗಿ, ಮಾಜಿ ಸೈನಿಕ ವರ್ಗಕ್ಕೆ ಸೇವೆ ಸಲ್ಲಿಸುವುದು ಹಾಗೂ ಸ್ಥಳೀಯ ನಾಗರೀಕರೊಂದಿಗೆ ಮಾಜಿ ಸೈನಿಕ ವರ್ಗದ ಪ್ರತಿನಿಧಿತ್ವ ವಹಿಸುವುದು.
13. ರಾಜ್ಯದ ಯುವಜನತೆಯು ಸಶಸ್ತ್ರ ಪಡೆಗಳನ್ನು ಸೇರಲು ಹುರಿದುಂಬಿಸುವ ನಿಟ್ಟಿನಲ್ಲಿ ಉಪಯುಕ್ತ ಮಾಹಿತಿಯನ್ನು ಪ್ರಚಾರ ಪಡಿಸುವುದು.

**ಇಲಾಖೆಯ ಕಾರ್ಯಚಟುವಟಿಕೆಗಳು**

ಈ ಇಲಾಖೆಯ ಕಾರ್ಯವ್ಯಾಪ್ತಿಯು ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರ ಕಲ್ಯಾಣ ಕಾರ್ಯಗಳಿಗೆ ಮಾತ್ರ ಸೀಮಿತಗೊಂಡಿರುತ್ತದೆ. ಆದುದರಿಂದ ಈ ಇಲಾಖೆಯಿಂದ ಪ್ರಕಟಗೊಂಡ ಮಾಹಿತಿಯು, ಸೈನಿಕರು ಮತ್ತು ಮಾಜಿ ಸೈನಿಕರಿಗೆ ಮತ್ತು ಅವರ ಅವಲಂಬಿತರಿಗೆ ಸೀಮಿತವಾಗಿರುತ್ತದೆ. ಆದುದರಿಂದ, ಸೇವಾ ನಿರತ ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರಿಗೆ ಈ ಇಲಾಖೆಯಿಂದ ಪ್ರಕಟಗೊಳ್ಳುವ ಮಾಹಿತಿಯು ಈ ಕೆಳಗಿನಂತಿದೆ.

ಇಲಾಖೆಯ ಕೇಂದ್ರ ಕಾರ್ಯಾಲಯವು ಬೆಂಗಳೂರಿನಲ್ಲಿರುತ್ತದೆ. ಜಿಲ್ಲಾ ಕಾರ್ಯಾಲಯಗಳಿಂದ ಬಗೆಹರಿಯದ ಯಾವುದೇ ವಿಷಯವನ್ನು ಈ ನಿರ್ದೇಶನಾಲಯದಿಂದ ಬಗ್ಗೆ ಹರಿಸಲಾಗುವುದು. ಆದುದರಿಂದ ಈ ವಿಷಯವನ್ನು ಮುಖ್ಯವಾಗಿ ಸೈನಿಕರ, ಮಾಜಿ ಸೈನಿಕರ ಹಾಗೂ ಅವರ ಅವಲಂಬಿತರಿಗೆ ತಿಳಿಸಬೇಕಾಗಿದೆ. ಕಾರಣ ಜಿಲ್ಲಾ ಕಾರ್ಯಾಲಯಗಳಿಂದ ಬಗೆಹರಿಯುವ ಸಮಸ್ಯೆಗಳನ್ನು ಸಹ ನೇರವಾಗಿ ಸರ್ಕಾರಕ್ಕೆ ಬರೆಯುವುದು ಕಂಡು ಬಂದಿದೆ.

1. ಮೇಲಿನದಲ್ಲದೇ, ಸಂಬಂಧಪಟ್ಟ ಜಿಲ್ಲಾ ಕಾರ್ಯಾಲಯಗಳನ್ನು ಸಂಪರ್ಕಿಸದೆ, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರು ನೇರವಾಗಿ ನಿರ್ದೇಶನಾಲಯಕ್ಕೆ ಬರುತ್ತಿರುವುದು ಕಂಡು ಬಂದಿದೆ. ಆದುದರಿಂದ ಅವರ ಯಾವುದೇ ಸಮಸ್ಯೆಯನ್ನು ಮೊದಲು ಜಿಲ್ಲಾ ಕಾರ್ಯಾಲಯದ ಮುಖ್ಯಸ್ಥರಾದ ಜಂಟಿ; ಉಪ ನಿರ್ದೇಶಕರಿಗೆ ಪ್ರಸ್ತಾಪ ಮಾಡಿ, ಅವರಿಂದ ಬಗೆಹರಿಯದ ಪಕ್ಷದಲ್ಲಿ, ಇಲಾಖಾ ಮುಖ್ಯಸ್ಥರಾದ ನಿರ್ದೇಶಕರಿಗೆ ಪ್ರಸ್ತಾಪಿಸುವುದು. ಇಲಾಖೆಯ ಜಿಲ್ಲಾ ಕಾರ್ಯಾಲಯಗಳ ಸ್ಥಳ ಹಾಗೂ ಕಾರ್ಯವ್ಯಾಪ್ತಿಯು ಈ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಕಾರ್ಯಾಲಯದ ಹೆಸರು ಮತ್ತು ಸ್ಥಳ | ಕಾರ್ಯಾಲಯದ ಕಾರ್ಯವ್ಯಾಪ್ತಿ ಜಿಲ್ಲೆಗಳು |
|---|---|---|
| 1 | 2 | 3 |
| 1. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಬೆಂಗಳೂರು (ನಗರ)<br>ಬೆಂಗಳೂರು- 560 025 | ಬೆಂಗಳೂರು (ನಗರ) |
| 2. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಬೆಂಗಳೂರು (ಗ್ರಾಮಾಂತರ)<br>ಜಿಲ್ಲೆ, ಬೆಂಗಳೂರು-560 025 | ಬೆಂಗಳೂರು (ಗ್ರಾಮಾಂತರ),<br>ತುಮಕೂರು ಮತ್ತು<br>ಕೋಲಾರ |
| 3. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಬೆಳಗಾವಿ | ಬೆಳಗಾವಿ |
| 4. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಮೈಸೂರು | ಮೈಸೂರು, ಮಂಡ್ಯ ಮತ್ತು<br>ಚಾಮರಾಜನಗರ |
| 5. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಮಡಿಕೇರಿ | ಕೊಡಗು ಮತ್ತು ಹಾಸನ |
| 6. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಮಂಗಳೂರು | ದಕ್ಷಿಣ ಕನ್ನಡ ಮತ್ತು ಉಡುಪಿ |
| 7. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಶಿವಮೊಗ್ಗ | ಶಿವಮೊಗ್ಗ, ಚಿಕ್ಕಮಗಳೂರು,<br>ಚಿತ್ರದುರ್ಗ ಮತ್ತು<br>ದಾವಣಗೆರೆ |
| 8. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಕಾರವಾರ (ಉ.ಕ) | ಉತ್ತರ ಕನ್ನಡ |

| 1 | 2 | 3 |
|---|---|---|
| 9. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಧಾರವಾಡ | ಧಾರವಾಡ, ಗದಗ,<br>ಹಾವೇರಿ ಮತ್ತು ಬಳ್ಳಾರಿ |
| 10. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ವಿಜಾಪೂರ | ವಿಜಾಪೂರ ಮತ್ತು ಬಾಗಲಕೋಟೆ |
| 11. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಗುಲಬರ್ಗಾ | ಗುಲಬರ್ಗಾ ಬೀದರ್,<br>ಕೊಪ್ಪಳ ಮತ್ತು<br>ರಾಯಚೂರು |

2. ಕರ್ನಾಟಕದಲ್ಲಿ ಅಂದಾಜು 4 ಲಕ್ಷ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ಇರುತ್ತಾರೆ. ಅವರಲ್ಲಿ ಸುಮಾರು 54500 ಮಾಜಿ ಸೈನಿಕರು ಮತ್ತು 13200 ವಿಧವೆಯರು ತಮ್ಮ ಹೆಸರುಗಳನ್ನು ನೋಂದಾಯಿಸಿದ್ದಾರೆ. ಅವರ ಕಲ್ಯಾಣ ಮತ್ತು ಪುನರ್ವಸತಿಗಾಗಿ ಕರ್ನಾಟಕ ಸರ್ಕಾರವು ಈ ಕೆಳಗಿನ ಸೌಲಭ್ಯ ಮತ್ತು ಸವಲತ್ತುಗಳನ್ನು ಜಾರಿಗೊಳಿಸಿದೆ.

1. ಉದ್ಯೋಗ ಮೀಸಲಾತಿ
2. ವಯೋಮಿತಿ ಸಡಿಲಿಕೆ ಹಾಗೂ ಶುಲ್ಕ ವಿನಾಯಿತಿ.
3. ವೇತನ ನಿಗದಿ
4. ತಾಂತ್ರಿಕ, ವೈದ್ಯಕೀಯ, ವೃತ್ತಿಪರ ಶಿಕ್ಷಣ ಹಾಗೂ ಇತರ ಕೋರ್ಸ್‌ಗಳಲ್ಲಿ ಮಾಜಿ ಸೈನಿಕರ ಮಕ್ಕಳಿಗೆ ಸೀಟುಗಳನ್ನು ಕಾಯ್ದಿರಿಸುವಿಕೆ.
5. ವೈದ್ಯಕೀಯ ಸವಲತ್ತು.
6. ಯುದ್ಧದಲ್ಲಿ ಮಡಿದ ಯೋಧರ ಅವಲಂಬಿತರಿಗೆ ಅನುಗ್ರಹ ಪೂರಕ ಅನುದಾನ, ಜಮೀನು ಅಥವಾ ಅದರ ಬದಲಾಗಿ ನಗದು ಅನುದಾನ ಮತ್ತು ಉಚಿತ ಗೃಹ ನಿರ್ಮಾಣ.
7. ಶೌರ್ಯ ಹಾಗೂ ಶೌರ್ಯೇತರ ಪ್ರಶಸ್ತಿ ವಿಜೇತರಿಗೆ ನಗದು ಅನುದಾನ ಮತ್ತು ಜಮೀನು ಅಥವಾ ಅದರ ಬದಲಾಗಿ ನಗದು ಅನುದಾನ
8. ಎರಡನೇ ಮಹಾಯುದ್ಧದಲ್ಲಿ ಭಾಗವಹಿಸಿ ಪಿಂಚಣಿ ಇಲ್ಲದೆ ಬಿಡುಗಡೆಯಾದ ಯೋಧರಿಗೆ ಮತ್ತು ಮೃತ ಯೋಧರ ವಿಧವೆಯರಿಗೆ ಮಾಸಿಕ ಗೌರವಧನ.
9. 1971ರ ಮುಂಚಿನ ಯುದ್ಧದಲ್ಲಿ ಹುತಾತ್ಮರಾದ ಯೋಧರ ವಿಧವೆಯರಿಗೆ ರೂ 500/- ಗಳ ಮಾಸಿಕ ಗೌರವಧನ.
10. ಮಿಲಿಟರಿ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯ ಸೌಲಭ್ಯಗಳು.
11. ಸೈನಿಕ ವಿಶ್ರಾಂತಿ ಗೃಹದ ಸೌಲಭ್ಯಗಳು.
12. ಶಿಷ್ಯ ವೇತನ/ಪುಸ್ತಕ ಅನುದಾನಗಳು.
13. ಯುದ್ಧ ಪ್ರಶಸ್ತಿ (ವಾರ್ ಅವಾರ್ಡ್).
14. ಧನ ಸಹಾಯಗಳು
    (ಅ) ವಾರ್ಷಿಕ ಪರಿಹಾರ ಧನ ಸಹಾಯ.
    (ಬ) ಮರಣೋತ್ತರ ಪರಿಹಾರ ಧನ ಸಹಾಯ
    (ಕ) ಸ್ಥಳೀಯ ಧನ ಸಹಾಯ

**ಕರ್ನಲ್ ಸಿ. ಎಂ. ಉತ್ತಯ್ಯ (ನಿವೃತ್ತ)**
ನಿರ್ದೇಶಕರು,
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು.

ಪಿ.ಆರ್.1002

**OFFICE OF THE DIRECTOR DEPARTMENT OF MINES AND GEOLOGY KHANIJA BHAVAN, RACE COURSE RAOD BANGALORE-1,**

**NOTIFICATION**

**No. DMG/DD(MA)8A/ 2002-2003 BANGALORE DATED: 29th JULY 2003**

The following area of Bantavala, Belathangadi Dakshina Kannada taluks and Kundapura, Udupi and Karkala taluks of Udupi district belonging to the State Government are hereby notified as available for grant of quarrying leases for non-specified minor minerals after thirty (30) days from the date of publication of this notification in the official Gazette, as per Sub-Rule (1) of Rule 8A of KMMCR 1994. If the day notified for receipt of the application happens to be a public holiday or a general holiday, the application. Will be accepted on the next working day.

The prescribed applications and the sketches of the notified area can be obtained from the office of the Deputy Director, Department of Mines & Geology, Mangalore Office, Dakshina Kannada district on payment of prescribed fees.

The interested general public are advised to inspect the areas and satisfy themselves about the availability of the Minerals, approach road, and extent before filing their quarry lease application with the office of the Deputy Director, Department of Mines and Geology, Mangalore Office, Dakshina Kannada district. The grant of quarry lease are subject to the clearance from the concerned authorities of the revenue Department.

**Dr. M. BASAPPA REDDY**
Director of Mines & Geology

**AREA PROPOSED FOR ISSUE OF NOTIFICATIONS UNDER RULE 8A OF KMMCR 1994 IN RESPECT OF NON-SPECIFIED MINER MINERALS IN DAKSHINA KANNADA DISTRICT**

| Sl. No. | Type of mineral | Block No. | Sy. No. | Extent in A.G | Village/ Taluk | Bounded by |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Building Stone | 1 | 239/1 | 0-50 | Belve/ Kundapur Taluk | **North:** Part of Sy.No. 238<br>**South:** Part of Sy.No. 239/1<br>**East:** Part of Sy.No. 239/1<br>**West:** Part of Sy.No. 239/1 |
| 2. | Building Stone | 1 | 117/3D | 0-90 | Pilar/ Udupi Tq. | **North:** Part of Sy.No. 117/3D<br>**South:** Part of Sy.No. 118<br>**East:** Part of Sy.No. 117/3D<br>**West:** Part of Sy.No. 117/3D |
| 3. | Building Stone | 1 | 180 | 0-50 | Neelavar/ Udupi Tq. | **North:** Part of Sy.No. 180<br>**South:** Part of Sy.No. 180<br>**East:** Part of Sy.No. 180<br>**West:** Part of Sy.No. 180 |
| 4. | Building Stone | 1 | 119/4 | 0-30 | Kadur/ Udupi Tq., | **North:** Part of Sy.No. 119/4<br>**South:** Part of Sy.No. 119/4<br>**East:** Part of Sy.No. 119/4<br>**West:** Part of Sy.No. 119/4 |
| 5. | Building Stone | 1 | 24 | 0-50 | Shirva/ Udupi Tq., | **North:** Part of Sy.No. 24<br>**South:** Part of Sy.No. 24<br>**East:** Part of Sy.No. 24<br>**West:** Part of Sy.No. 24 |
| 6. | Building Stone | 1 | 24 | 0-50 | Shirva/ Udupi Tq., | **North:** Part of Sy.No. 24<br>**South:** Part of Sy.No. 24<br>**East:** Part of Sy.No. 24<br>**West:** Part of Sy.No. 24 |
| 7. | Building Stone | 1245 | 45 | 1-00 | Cherkadi/ Udupi Tq., | **North:** Part of Sy.No. 319/1<br>**South:** Part of Sy.No. 319/1<br>**East:** Part of Sy.No. 319/1<br>**West:** Part of Sy.No. 319/1 |
| 8. | Building Stone | 1 | 217 | 1-50 | Belman/ Karkala Tq., | **North:** Part of Sy.No. 217<br>**South:** Part of Sy.No. 217<br>**East:** Part of Sy.No. 217<br>**West:** Part of Sy.No. 217 |
| 9. | Building Stone | 1 | 440/3 | 1-00 | Shirva/ Udupi Tq., | **North:** Part of Sy.No. 440/3<br>**South:** Part of Sy.No. 440/3<br>**East:** Part of Sy.No. 559<br>**West:** Part of Sy.No. 416 |
| 10. | Building Stone | 1 | 217 | 2-00 | Belman/ Karkal Tq., | **North:** Part of Sy.No. 217<br>**South:** Part of Sy.No. 217<br>**East:** Part of Sy.No. 217<br>**West:** Part of Sy.No. 217 |
| 11. | Building Stone | 1 | 81 | 0-50 | Nancharu/ Udupi Tq., | **North:** Part of Sy.No. 81<br>**South:** Part of Sy.No. 81<br>**East:** Part of Sy.No. 81<br>**West:** Part of Sy.No. 81 |
| 12. | Building Stone | 1 | 52 | 0-50 | Heskathur/ Kundapur Tq., | **North:** Part of Sy.No. 52<br>**South:** Part of Sy.No. 52<br>**East:** Part of Sy.No. 52<br>**West:** Part of Sy.No. 52 |

| 1 | 2 | 3 | 4 | 5 | 6 | 7 |
|---|---|---|---|---|---|---|
| 13. | Building Stone | 1 | 217 | 2-30 | Belman/ Karkala Tq., | **North:** Part of Sy.No. 177/2<br>**South:** Part of Sy.No. 387<br>**East:** Part of Sy.No. 367/1<br>**West:** Part of Sy.No. 217 |
| 14. | Building Stone | 1 | 544 | 2-00 | Nitte/ Karkala | **North:** Part of Sy.No. 544<br>**South:** Part of Sy.No. 544<br>**East:** Part of Sy.No. 544<br>**West:** Part of Sy.No. 544 |
| 15. | Building Stone | 1 | 217 | 1-00 | Belman/ Karkala | **North:** Part of Sy.No. 217<br>**South:** Part of Sy.No. 217<br>**East:** Part of Sy.No. 217<br>**West:** Part of Sy.No. 217 |
| 16. | Building Stone | 1 | 168 | 2-00 | Sooda/ Karkala | **North:** Part of Sy.No. 168<br>**South:** Part of Sy.No. 168<br>**East:** Part of Sy.No. 168<br>**West:** Part of Sy.No. 168 |
| 17. | Building Stone | 1 | 345 | 0-50 | Yerlapadi/ Karkala Tq., | **North:** Part of Sy.No. 345<br>**South:** Part of Sy.No. 345<br>**East:** Part of Sy.No. 345<br>**West:** Part of Sy.No. 345 |
| 18. | Building Stone | 1 | 371 | 0-50 | Ujire/ Belthangadi Tq., | **North:** Part of Sy.No. 371<br>**South:** Part of Sy.No. 371<br>**East:** Part of Sy.No. 371<br>**West:** Part of Sy.No. 371 |
| 19. | Building Stone | 1 | 633/1A | 0-50 | Kolnadu/ Bantwal Tq., | **North:** Part of Sy.No. 633/1<br>**South:** Part of Sy.No. 633/1<br>**East:** Part of Sy.No. 633/1B<br>**West:** Part of Sy.No. 620 |
| 20. | Building Stone | 1 | 292/2 | 0-75 | Era/ Bantwal Tq., | **North:** Part of Sy.No. 292/2<br>**South:** Part of Sy.No. 292/2<br>**East:** Part of Sy.No. 292/2<br>**West:** Part of Sy.No. 292/2 |
| 21. | Building Stone | 1 | 217 | 2-00 | Bellman/ Karkal Tq., | **North:** Part of Sy.No. 217<br>**South:** Part of Sy.No. 217<br>**East:** Part of Sy.No. 387<br>**West:** Part of Sy.No. 217 |
| 22. | Building Stone | 1 | 24 | 0-50 | Shirva/ Udupi Tq., | **North:** Part of Sy.No. 24<br>**South:** Part of Sy.No. 24<br>**East:** Part of Sy.No. 24<br>**West:** Part of Sy.No. 24 |

**Dr. M. BASAPPA REDDY**
Director of Mines & Geology

PR- 1003

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ. ಬಿ. ನಂ. 5309, ಬೆಂಗಳೂರು**

**ಅಧಿಸೂಚನೆ ಸಂಖ್ಯೆ: ಕೃಮಾಇ: 40: ಚುನಾವ: 2002 ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಕಾಯಿದೆ, 1966ರ ಪ್ರಕರಣ 11ರ ಉಪ ಪ್ರಕರಣ (1)(Viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಪ್ರಕರಣ 11ರ ಪ್ರಕಾರ ರಚಿತವಾಗಿರುವ ಈ ಕೆಳಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರ.ಸಂ. | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರಾಗಿ ನಾಮಕರಣಗೊಂಡ ಅಧಿಕಾರಿಗಳು |
|---|---|---|---|
| 1. | ಬೆಂಗಳೂರು ಗ್ರಾಮಾಂತರ | ಕನಕಪುರ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು. |

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು.

ಪಿ.ಆರ್.1008

**DRESDNER KLEINWORT CAPITAL ADVISORY SERVICES (INDIA) PRIVATE LIMITED**
**Regd Office: 1305, 13th Upper Floor, 'Raheja Towers', East Wing, 26-27, M.G. Road, Bangalore-560001**

Notice is hereby given pursuant to section 485 of the Companies Act, 1956 that the Company in terms of section 484(1)(b) of the Companies Act, 1956, passed a Special Resolution at the Third Annual General Meeting held on August 30, 2003, to wind up the Company by members voluntary winding up.

That the Company has appointed Mr Saji P. John, Advocate, Bangalore, as Liquidator of the Company for the purpose of such winding up as per the provisions of the Companies Act, 1956.

By order of the board
Liquidator/ Director.

**FORM No.151**
**(See Rule 315)**
**Members' (or Creditors') Voluntary Winding-Up**
**NOTICE OF APPOINTMENT OF LIQUIDATOR PURSUANT TO SECTION 516**

| | |
|---|---|
| Name of the Company: | Dresdner Kleinwort Capital Advisory Services (India) Private Limited |
| Nature of business: | Management, financial and business consultancy services |
| Address of the Registered Office: | 1305, 13th Upper Floor, 'Raheja Towers' East Wing 26-27, M.G. Road, Bangalore-560 001. |
| Name and address of the Liquidator: | Saji P. John, Advocate No. 32, Lakshmi Nivas, Cashier Layout, 3rd Cross, Tavarekere, Bangalore-560 029 |
| Date of appointment: | August 30, 2003 |
| By whom appointed: | The shareholders of the Company by the Special Resolution dated August 30, 2003 |

Liquidator

**FORM No.152**
**(See Rule 315)**
**Members' (or Creditors') Voluntary Winding-Up**
**NOTICE OF APPOINTMENT OF LIQUIDATOR PURSUANT TO SECTION 516**

| | |
|---|---|
| Name of the Company: | Dresdner Kleinwort Capital Advisory Services (India) Private Limited |
| Nature of business: | Management, financial and business consultancy services |
| Presented by: | Saji P. John, Advocate - Liquidator |

To,
The Registrar of Companies
II Floor, 'E' Wing
Kendriya Sadan
Koramangala
Bangalore-560 034

I, Saji P. John, S/o Sri. P. J. John, residing at No. 32, Lakshmi Nivas, Cashier Layout, 3rd Cross, Tavarekere, Bangalore-560 029, hereby give notice that I have been appointed as Liquidator of **Dresdner Kleinwort Capital Advisory Services (India) Private Limited** by special resolution of the company dated August 30, 2003.

Place: Bangalore Liquidator
date: 02-09-2003
PD-85

**NOTICE OF APPOINTMENT OF LIQUIDATOR PURSUANT TO SECTION 516 OF COMPANIES ACT, 1956**

I, R. Ramesh S/o. S. Ramachandran of #2/ 388 Mugappaie West, J.J. Nagar, Chennai hereby give notice that I have been appointed as liquidator of Rathi Leasing Limited having registered office at "Bhavani", 337-H, 9th K Mani Hoshally, Vijayanagar, Bangalore-560 040 with the nature of Business as Non-Banking Finance Company by resolution of the shareholders on 3rd September 2003.

**R. Ramesh**
Liquidator

**RATHI LEASING LIMITED**
**Reg. Office: 'Bhavani', 337-H, 9th K Main, Hoshally, Vijayanagar, Bangalore-560 040**
**NOTICE**

Please take notice that at the General Meeting of the members of the said company, duly convened and held at the registered office of the Company at Bhavani, 337-H, 9th K Main Hoshally, Vijayanagar, Bangalore-560 040 on 3rd day of September 2003, the following Resolutions were duly passed:

**Special Resolution-**

"RESOLVED, pursuant to section 484(1)(b) of the Companies Act, 1956 that the consent of the shareholders be and is hereby given for winding up the Company by the members voluntarily".

**Ordinary resolution-**

"RESOLVED FURTHER that Mr. R. Ramesh be and is hereby appointed as a Liquidator of the company pursuant to the provisions of section 490 of the Companies Act, 1956, at a remuneration of Rs. 1,000/- in addition to his costs, charges and expenses".

Place: Bangalore **R. Ramesh**
date: 3.9.2003 Liquidator
PD-86

**FORM-151**
**[See Rule 315]**
**Members Voluntary Winding up**
**Notice of appointment of Liquidator pursuant to section 516**

| | | |
|---|---|---|
| Name of the Company | : | Coorg Export & Investment Co. Ltd., |
| Nature of Business | : | Finance & Investment. |
| Address of Registered Office | : | 4/16, Palace Road, Bangalore-560 052. |
| Name(s) and Address(es) of Liquidator | : | Mr. B.D. Mohta<br>15/3, Infantry Road Cross, Bangalore-560 001 |
| Date of Appointment | : | 11th August, 2003 |
| By whom appointed | : | Members by a Special Resolution. |

**B.D. MOHTA**
LIQUIDATOR.

PD-83

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕಟಣೆ ಸಂಖ್ಯೆ: ಬಿ1-71ಎ-ಸಿಆರ್:1/2003-04, ದಿನಾಂಕ: 12ನೇ ಆಗಸ್ಟ್, 2003**

**ವಿಷಯ:** ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಶಿವಮೊಗ್ಗ ಅರಣ್ಯ ವಿಭಾಗದ ವಿವಿಧ ವಲಯ ಅರಣ್ಯಾಧಿಕಾರಿಗಳು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ಸೊತ್ತಿನೊಂದಿಗೆ ವಶಪಡಿಸಿಕೊಂಡು, ಅರಣ್ಯ ಮೊಕದ್ದಮೆ ದಾಖಲಿಸಿ, ಕರ್ನಾಟಕ ಅರಣ್ಯ ಕಾಯ್ದೆ 1963ರ 71ಎ ನಿಯಮದ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮೇಲ್ಕಂಡ ಪ್ರಾಧಿಕೃತ ಅಧಿಕಾರಿಗಳಿಗೆ ಮನವಿ ಸಲ್ಲಿಸಿರುತ್ತಾರೆ. ವಾಹನಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ/ ಪೊಲೀಸ್ ಕ್ರೈಂ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| | | **(1) ಆಯನೂರು ವಲಯ** | | |
| 1. | 142/02-03 | ಬಜಾಜ್ ಎಂ 80 ಸ್ಕೂಟರ್ ನಂ. ಎಂ.ಇ.ಎಸ್. 2112 | 433-438 | ಕಾಣುತ್ತಿಲ್ಲ. |
| | | **(2) ರಿಪ್ಪನ್‌ಪೇಟೆ ವಲಯ** | | |
| 2. | 11/03-04 | ಬಜಾಜ್ ಸೂಪರ್ ಸ್ಕೂಟರ್ ನಂ. ಸಿ.ಟಿ.ವಿ. 2311 | 026076 | |
| | | **(3) ತೀರ್ಥಹಳ್ಳಿ ವಲಯ** | | |
| 3. | 21/03-04 | ಮಾರುತಿ 800 ಕಾರು ನಂ. ಕೆ.ಎಲ್.ಓ. ಎಂ.9129 (ಕೆ.ಎಲ್. 10 ಎಂ. 9129) | F 8 B1N 2183989 | SB 308 1N 1571368 |
| 4. | 22/03-04 | ಮಾರುತಿ ಎಸ್ಟೀಂ ಕಾರು ನಂ. ಕೆ.ಎ. 25 ಎಂ. 7649 | 169161 | MA 3EBD 21500 111062 |
| 5. | 26/03-04 | ಲಾರಿ ನಂ. ಎಂ.ಇ.ಜೆಡ್ 7715 | 61CXP692007/ 173846 | 344052166140 |
| 6. | 27/03-04 | ಲಾರಿ ನಂ. ಎಂ.ಇ.ಜಿ. 7956 | 6-92D06/ 104594 | 344052098337 |
| | | **(4) ಮಂಡಗದ್ದೆ ವಲಯ** | | |
| 7. | 24/03-04 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆ.ಎ. 14 ಇ 9475 | 06P93B-00397 | 06 B 93 B 00428 |
| 8. | 29/03-04 | ಸುಜುಕಿ ಮ್ಯಾಕ್ಸ್ ಆರ್ 100 ಮೋಟಾರ್ ಬೈಕ್ ನಂ. ಕೆ.ಎ. 14 ಹೆಚ್ 7902 | 1509 M 593096 | 1509 F 549522 |
| 9. | 33/03-04 | ಹೀರೋ ಹೊಂಡಾ ಮೋಟಾರ್ ಬೈಕ್ ನಂ. ಕೆ.ಎ. 14 ಇ 9547 | H 10 E 69430 | ಕಾಣುತ್ತಿಲ್ಲ. |
| 10. | 34/03-04 | ಹೀರೋ ಹೊಂಡಾ ಮೋಟಾರ್ ಬೈಕ್ 'ನಂ. ಕೆ.ಎ. 17 ಇ 5911 | E 11 E 318480 | E 11 F 008506 |

**ಜಿ. ಜಯರಾಮಯ್ಯ**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್.986

**KARNATAKA STATE PHARMACY COUNCIL**
**(Constituted Under Pharmacy Act 1948)**
**Office of the Registrar KARNATAKA STATE PHARMACY COUNCIL**
**No. 514/E, 1st Main, Vijayanagar Club Road, R.P.C. Layout,**
**Vijayanagar 2nd Stage, Bangalore-560 040.**
**MATTER FOR PUBLICATION**
**No.KSPC/403/2003-2004, 25th August, 2003**

Following have been elected to the Karnataka State Pharmacy Council Election under Section 19 (a) of Pharmacy Act 1948.

1. Mr. Gangadhar Veerabhadrappa Yavagal
2. Mr. Gundu Rao D.A.
3. Mr. Hipparagi Shivakumar Mallappa
4. Mr. Madarkhandi R.S.
5. Mr. Venkappa Somappa Banvi
6. Mr. Nagaraj M.S.

PRESIDENT
KARNATAKA STATE PHARMACY COUNCIL

PD-84

**MINISTRY OF LABOUR**
**LABOUR BUREAU**
**'Cleremount' Shimla-171004 Dated:2nd July 2003**
**CONSUMER PRICE INDEX NUMBERS FOR INDUSTRIAL WORKERS**

State: Karnataka (Base: 1982=100) Month: May 2003

| Group/Sub-group Centre | | Bangalore | Belgaum | Hubli Dharwar | Mercara |
|---|---|---|---|---|---|
| 1 | | 2 | 3 | 4 | 5 |
| IA. | **FOOD:** (a) Cereals & Products | 436 | 525 | 445 | 437 |
| | (b) Pulses & Products | 525 | 493 | 528 | 585 |
| | (c) Oil & Fats | 430 | 402 | 422 | 367 |
| | (d) Meat, Fish & Eggs | 567 | 524 | 550 | 594 |
| | (e) Milk & Products | 355 | 491 | 423 | 424 |
| | (f) Condiments & Spices | 465 | 535 | 508 | 471 |
| | (g) Vegetables & Fruits | 481 | 462 | 672 | 474 |
| | (h) Other Food | 669 | 682 | 604 | 674 |
| | **FOOD GROUP** | 493 | 535 | 503 | 504 |
| IB. | Pan, Supari, Tobacco & Intoxicants | 626 | 593 | 571 | 496 |
| II. | Fuel & Light | 621 | 625 | 545 | 418 |
| III. | Housing Index | 521 | 616 | 479 | 188 |
| IV. | Clothing, Bedding & Footwear | 276 | 254 | 312 | 401 |
| V. | **Miscellaneous:** (a) Medical Care | 468 | 476 | 458 | 512 |
| | (b) Education, Recreation & Amusement | 388 | 664 | 566 | 623 |
| | (c) Transport & Communication | 572 | 448 | 576 | 628 |
| | (d) Personal Care & effects | 468 | 433 | 479 | 438 |
| | (e) Others | 477 | 566 | 443 | 472 |
| | Miscellaneous Group | 471 | 509 | 491 | 505 |
| | **GENERAL INDEX** | **475** | **530** | **495** | **471** |

**R.S. NEGI**
ASSISTANT DIRECTOR

**DIRECTORATE OF ECONOMICS AND STATISTICS, GOVERNMENT OF KARNATAKA, BANGALORE-1**

**Consumer Price Index Numbers for Industrial Workers**

No. DES 20 PWX 2003 Month: May 2003

State: Karnataka Base: 1987-88=100 Date : 22-07-2003

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 315 | 389 | 350 | 339 | 290 | 337 | 358 | 311 | 276 | 396 | 328 | 396 |
| | (b) Pulses & Products | 242 | 295 | 279 | 339 | 277 | 284 | 302 | 309 | 296 | 297 | 282 | 310 |
| | (c) Oil & Fats | 226 | 266 | 248 | 266 | 269 | 266 | 277 | 289 | 251 | 273 | 273 | 289 |
| | (d) Meat, Fish & Eggs | 302 | 316 | 365 | 431 | 313 | 345 | 286 | 346 | 565 | 355 | 385 | 318 |
| | (e) Milk & Products | 319 | 215 | 257 | 287 | 279 | 262 | 249 | 317 | 267 | 253 | 300 | 255 |
| | (f) Condiments & Spices | 207 | 305 | 436 | 354 | 299 | 317 | 265 | 251 | 245 | 298 | 268 | 280 |
| | (g) Vegetables & Fruits | 259 | 386 | 305 | 386 | 319 | 314 | 304 | 484 | 271 | 352 | 274 | 505 |
| | (h) Other Food | 241 | 333 | 303 | 319 | 258 | 248 | 262 | 264 | 266 | 289 | 279 | 315 |
| | **FOOD GROUP INDEX** | 279 | 331 | 325 | 336 | 286 | 300 | 302 | 317 | 316 | 324 | 307 | 345 |
| II. | Pan, Supari, Tobacco & Intoxicants | 299 | 336 | 343 | 314 | 389 | 411 | 332 | 450 | 280 | 310 | 338 | 370 |
| III. | Fuel & Light | 296 | 308 | 251 | 446 | 278 | 304 | 347 | 318 | 270 | 299 | 363 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 250 | 217 | 373 | 294 | 240 | 320 | 377 | 241 | 288 | 401 | 195 |
| VI. | **MISCELLANEOUS:**<br>(a) Medical Care | 566 | 451 | 363 | 291 | 286 | 275 | 364 | 327 | 336 | 295 | 370 | 219 |
| | (b) Education, Recreation & Amusement | 331 | 290 | 391 | 207 | 346 | 377 | 320 | 277 | 295 | 408 | 336 | 356 |
| | (c) Transport & Communication | 280 | 377 | 327 | 333 | 595 | 337 | 347 | 557 | 347 | 400 | 388 | 349 |
| | (d) Personal Care & effects | 252 | 268 | 244 | 267 | 287 | 253 | 271 | 293 | 262 | 312 | 249 | 261 |
| | (e) Others | 319 | 344 | 283 | 438 | 286 | 262 | 276 | 281 | 236 | 296 | 403 | 243 |
| | Miscellaneous Group | 353 | 319 | 305 | 308 | 330 | 294 | 305 | 300 | 286 | 347 | 340 | 276 |
| | **GENERAL INDEX** | 270 | 294 | 280 | 320 | 274 | 271 | 285 | 299 | 280 | 290 | 304 | 272 |
| | To convert to Base 1960 Multiply by Linking Factor. | **7.39** | **9.19** | **8.27** | **---** | **8.26** | **8.56** | **9.25** | **7.92** | **9.31** | **9.05** | **---** | **---** |

PR-987 For Director.

**OFFICE OF THE DIRECTOR, DEPARTMENT OF MINES AND GEOLOGY, KHANIJA BHAVAN, RACE COURSE ROAD, BANGALORE-1**

**NOTIFICATION**

**No.DMG/DD(MA)8A/2002-2003, Dated: 16th July, 2003**

The following area of Chikkaballapura, Kolar taluk, Kolar district belonging to the State Government are hereby notified as available for grant of quarrying leases for non-specified minor minerals after thirty (30) days from the date of publication of this notification in the official Gazette, as per Sub-Rule (1) of Rule 8A of KMMCR 1994. If the day notified for receipt of the application happens to be a public holiday or a general holiday, the application will be accepted on the next working day.

The prescribed applications and the sketches of the notified area can be obtained from the office of the Senior Geologist, Department of Mines & Geology, Kolar Office, Kolar on payment of Prescribed fees.

The interested general public are advised to inspect the areas and satisfy themselves about the availability of the minerals, approach road, and extent before filing their quarry lease application with the office of the Senior Geologist, Department of Mines and Geology, Kolar Office, Kolar district. The grant of quarry lease are subject to the clearance from the concerned authorities of the Revenue Department.

Dr. M. BASAPPA REDDY,
DIRECTOR OF MINES & GEOLOGY.

**AREA PROPOSED FOR ISSUE OF NOTIFICATIONS UNDER RULE 8A OF KMMCR 1994 IN RESPECT OF NON-SPECIFIED MINER MINERALS IN KOLAR DISTRICT**

| Sl. No. | Type of mineral | Block No. | Sy. No. | Extent in A.G. | Village/ Taluk | Bounded by |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Building Stone | B-I | 110 | 0-20 | Karadu Bande/ Hosahally Kolar. | **North:** Part of Sy. No. 110<br>**South:** ಕ.ಗ.ಗು. ಸಂಖ್ಯೆ: 89<br>**East:** Part of Sy.No. 110<br>**West:** Part of Sy.No. 110 |
| 2. | Building Stone | B-II | 110 | 0-10 | -do- | **North:** Part of Sy. No. 110<br>**South:** Part of Sy.No. 110<br>**East:** Part of Sy.No. 110<br>**West:** Part of Sy.No. 110 |
| 3. | Building Stone | B-III | 110 | 3-00 | -do- | **North:** Part of Sy. No. 110<br>**South:** Part of Sy.No. 110<br>**East:** Part of Sy.No. 110<br>**West:** Part of Sy.No. 110 |
| 4. | Building Stone | B-IV | 110 | 1-20 | -do- | **North:** Part of Sy. No. 110<br>**South:** Part of Sy.No. 110<br>**East:** Part of Sy.No. 110<br>**West:** Part of Sy.No. 110 |
| 5. | Building Stone | - | 130 | 2-12 | -do- | **North:** Part of Sy. No. 130<br>**South:** Part of Sy.No. 130<br>**East:** Part of Sy.No. 130<br>**West:** Part of Sy.No. 130 |
| 6. | Building Stone | - | 78 | 1-00 | Chikkana Halli/ Kolar | **North:** Part of Sy. No. 78<br>**South:** Part of Sy.No. 78<br>**East:** Part of Sy.No. 78<br>**West:** Part of Sy.No. 78 |
| 7. | Building Stone | B-I | 29 | 2-00 | Doddavallabi/ Kolar | **North:** Part of Sy. No. 29<br>**South:** Part of Sy.No. 29<br>**East:** Part of Sy.No. 29<br>**West:** Part of Sy.No. 29 |
| 8. | Building Stone | B-II | 29 | 0-32 | -do- | **North:** Part of Sy. No. 29<br>**South:** Part of Sy.No. 29<br>**East:** Part of Sy.No. 29<br>**West:** Part of Sy.No. 29 |

| 1 | 2 | 3 | 4 | 5 | 6 | 7 |
|---|---|---|---|---|---|---|
| 9. | Building Stone | - | 53 | 1-00 | Dhanaghatna halli/ Kolar | **North:** Part of Sy. No. 53<br>**South:** Part of Sy.No. 53<br>**East:** Part of Sy.No. 53<br>**West:** Part of Sy.No. 53 |
| 10. | Building Stone | B-II | 43 | 7-00 | Chikanagapalli/ Chikkaballa pura Tq | **North:** Part of Sy. No. 43<br>**South:** Part of Sy.No. 43<br>**East:** Part of Sy.No. 43<br>**West:** Part of Sy.No. 43 |
| 11. | Building Stone | B-III | 43 | 3-20 | Chikanagapalli/ Chikkaballa pura Tq | **North:** Part of Sy. No. 43<br>**South:** Part of Sy.No. 43<br>**East:** Part of Sy.No. 43<br>**West:** Part of Sy.No. 43 |
| 12. | Building Stone | - | 25 | 2-00 | Sokkena Halli/ Kolar | **North:** Dinnehosahalli boundary<br>**South:** Part of Sy.No. 25<br>**East:** Part of Sy.No. 25<br>**West:** Part of Sy.No. 25 |

Dr. M. BASAPPA REDDY,
DIRECTOR OF MINES & GEOLOGY.

PR-988

## ಕೃಷಿ ಮಾರಾಟ ಇಲಾಖೆ

### ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕೃಮಾಇ:200:ನಿಯವಿ:2003, ದಿನಾಂಕ: 19ನೇ ಜುಲೈ, 2003**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಈ ಕೆಳಕಂಡ ಅಧಿಸೂಚನೆಗಳಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಮಾರುಕಟ್ಟೆಗಳ ಮುಖ್ಯಾಧಿಕಾರಿ, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರವಾರ ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರಾಟಕ್ಕಾಗಿ (1) ಸದಾಶಿವಗಡ (ಚಿತ್ತಾಕುಲ) (2) ಬಿಣಗಾ (3) ಚೆಂಡಿಯಾ (4) ಅಮದಳ್ಳಿ (5) ಅರ್ಗಾ (6) ಮಾಜಾಳಿ (7) ಕದ್ರಾ ಮತ್ತು (8) ಅಂಕೋಲಾ ಪ್ರದೇಶಗಳನ್ನು ಉಪಮಾರುಕಟ್ಟೆ ಎಂದು ಸದರಿ ಅಧಿಸೂಚನೆಗಳ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಉಪಮಾರುಕಟ್ಟೆ ಪ್ರಾಂಗಣಗಳೆಂದು ಘೋಷಿಸಿದ್ದರು.

(1) ಸಂಖ್ಯೆ: ಎಂಡಿ:ಇಎಂ:ಸಿಆರ್:214: ಆರ್ ಅಂಡ್ ಇ: 78-79, ದಿನಾಂಕ: 21.07.1978.

(2) ಸಂಖ್ಯೆ: ಕೃಮಾಇ:291:ನಿಯವಿ:88, ದಿನಾಂಕ: 29.08.1989.

(3) ಸಂಖ್ಯೆ: ಕೃಮಾಇ:170:ನಿಯವಿ:92, ದಿನಾಂಕ: 31.10.1994.

ಈಗ ಕದ್ರಾ ಮತ್ತು ಅಂಕೋಲಾ ಉಪ ಮಾರುಕಟ್ಟೆಗಳಲ್ಲಿ ಮಾತ್ರ ನಿಯಂತ್ರಿತ ಹುಟ್ಟುವಳಿಗಳ ಮಾರಾಟದ ವ್ಯವಹಾರ ಜರುಗುತ್ತಲಿದ್ದು ಉಳಿದ 6 ಉಪಮಾರುಕಟ್ಟೆಗಳಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಪ್ರದೇಶಗಳಲ್ಲಿ ನಿಯಂತ್ರಿತ ಹುಟ್ಟುವಳಿಗಳ ಆವಕವು ಇರದೇ ವಾರದ ಸಂತೆಯಾಗಲಿ ಅಥವಾ ಸಗಟು ವ್ಯವಹಾರವಾಗಲಿ ನಡೆಯುತ್ತಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಕಾರವಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಗಳ ಮೂಲಕ ಘೋಷಿಸಲಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಉಪ ಮಾರುಕಟ್ಟೆಗಳನ್ನು ಹಾಗೂ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸೀಮಾಬದ್ಧ ಸ್ಥಳದ ಉಪಮಾರುಕಟ್ಟೆ ಪ್ರಾಂಗಣಗಳನ್ನು ರದ್ದುಪಡಿಸಲು ಉದ್ದೇಶಿಸಿದ್ದೇನೆ.

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ. 16, 11ನೇ ರಾಜಭವನ ರಸ್ತೆ, ಬೆಂಗಳೂರು-01 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಸೈಯದ್ ಜಮೀರ್ ಪಾಷಾ,**
ನಿರ್ದೇಶಕರು.

ಪಿ.ಆರ್.989

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಅನ್ನಪೂರ್ಣಮ್ಮ, ಕಿ.ಮ.ಆ. ಸಹಾಯಕಿ ಸಮುದಾಯ ಆರೋಗ್ಯ ಕೇಂದ್ರ ಪಾವಗಡ, ತುಮಕೂರು ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿಯ ಅವಧಿಯ ಬಗ್ಗೆ ಅಂತಿಮ ಆರೋಪ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣಾ ಹಾಗೂ ತಿಳುವಳಿಕೆ ಪತ್ರದ ಸಂಖ್ಯೆ: ಡಿಪಿಎನ್(4):ಸಿಆರ್-27:2000-01, ದಿನಾಂಕ: 26.7.2001.
2) ನೌಕರರು ಲಿಖಿತ ಅಹವಾಲು ಸಲ್ಲಿಸಿಲ್ಲ.
3) ವಿಚಾರಣಾಧಿಕಾರಿಗಳು ನೇಮಕಾತಿ ಆದೇಶದ ಸಂಖ್ಯೆ:ಡಿಪಿಎನ್(4):ಸಿಆರ್:27:00-01, ದಿನಾಂಕ:15.2.2002.
4) ವಿಚಾರಣಾಧಿಕಾರಿಯ ಸಂಖ್ಯೆ: ಮುಜಾಅ-ಜಾಕೋ:ಎನ್‌ಟಿ:154:2001-02, ದಿನಾಂಕ:04.04.2003
5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್(4):ಸಿಆರ್:27:00-01: ದಿನಾಂಕ: 29-04-2003.
6) ನೌಕರರ ಲಿಖಿತ ಅಹವಾಲು ದಿನಾಂಕ: 17.5.2003.

**ಪ್ರಸ್ತಾವನೆ:**

ಶ್ರೀಮತಿ ಅನ್ನಪೂರ್ಣಮ್ಮ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ, ತುಮಕೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 23.02.1982 ರಿಂದ ಇಲ್ಲಿಯವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಾಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣೆಯನ್ನು ಜಾರಿಗೊಳಿಸಿದ್ದು, ಇದಕ್ಕನುಗುಣವಾಗಿ ನೌಕರರು ಲಿಖಿತ ಉತ್ತರವನ್ನು ಸಲ್ಲಿಸದೇ ಇರುವುದರಿಂದ ಗೈರು ಹಾಜರಿ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಮುಖ್ಯ ಜಾಗೃತ ಅಧಿಕಾರಿ (ಜಾ.ಕೋ). ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದರ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿನ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿ.ಪಿ.ಎನ್.(4):ಸಿ.ಆರ್.:27:2000-01, ದಿನಾಂಕ: 4ನೇ ಆಗಸ್ಟ್, 2003**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಎಂ.ವಿ. ಮುರುಘೇಂದ್ರಪ್ಪ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಅನ್ನಪೂರ್ಣಮ್ಮ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ ತುಮಕೂರು ಜಿಲ್ಲೆ ಇವರ ದಿನಾಂಕ: 23.02.1982ರಿಂದ ಇಲ್ಲಿಯವರೆವಿಗೂ ಆದ ಅನಧಿಕೃತ ಗೈರು ಹಾಜರಿಯ ಆರೋಪ ಸಾಬೀತಾಗಿರುವುದರಿಂದ ಸದರಿ ನಿಯಮಗಳು 8(8)ರ ಪ್ರಕಾರ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿದ್ದೇನೆ.

**ಡಾ: ಎಂ.ವಿ. ಮುರುಘೇಂದ್ರಪ್ಪ,**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್.990

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಅಮಾನುಲ್ಲಾ ಖಾನ್, ಶುಶ್ರೂಷಕ, ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(17):ಸಿಆರ್-360: 81-82, ದಿನಾಂಕ: 26.11.92.
2) ನೌಕರರು ಲಿಖಿತ ಅಹವಾಲು ಸಲ್ಲಿಸಿರುವುದಿಲ್ಲ.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶದ ಸಂಖ್ಯೆ: ಡಿಪಿಎನ್(17): ಸಿಆರ್: 360:81-82, ದಿನಾಂಕ:14.11.2000.
4) ವಿಚಾರಣಾ ವರಧಿಯ ಸಂಖ್ಯೆ: ವಿಅ:ವಿಚಾರಣೆ:ಎನ್‌ಜಿ:46:2000-01, ದಿನಾಂಕ:09.02.2003

**ಪ್ರಸ್ತಾವನೆ:**

ಶ್ರೀ ಕೆ. ಅಮಾನುಲ್ಲಾ ಖಾನ್, ಶುಶ್ರೂಷಕ ಇವರು ಈ ಹಿಂದೆ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 08.07.82 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಇದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ, ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಕೋ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿ.ಪಿ.ಎನ್.(17):ಸಿ.ಆರ್360:81-82, ಬೆಂಗಳೂರು, ದಿನಾಂಕ: 11ನೇ ಆಗಸ್ಟ್, 2003**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಎಂ.ವಿ. ಮುರುಘೇಂದ್ರಪ್ಪ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಕೆ. ಅಮಾನುಲ್ಲಾಖಾನ್, ಶುಶ್ರೂಷಕ, ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ ಇವರು ದಿನಾಂಕ: 8.7.82 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಇವರು ದಿನಾಂಕ:8.7.82 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಕಾರಣ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ದಿನಾಂಕ:8.7.82ರಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದ್ದೇನೆ.

**ಡಾ: ಎಂ.ವಿ. ಮುರುಘೇಂದ್ರಪ್ಪ,**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್.991

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38(7)ರ ಮೇರೆಗೆ ನೀಡಲಾದ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ ಪತ್ರ ಹಾಗೂ ನಮೂನೆ-10ರಲ್ಲಿನ ದೋಷವನ್ನು ತಿದ್ದುಪಡಿಮಾಡಿ ತಿದ್ದುಪಡಿ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1) ಮೂಲ ದಾವಾ ಸಂಖ್ಯೆ:1580:2001-02 ತೀರ್ಪು ದಿನಾಂಕ:29.01.2002 ಮತ್ತು ಮೂಲದಾವಾ ಸಂಖ್ಯೆ: 24:2002-03 ತೀರ್ಪು ದಿನಾಂಕ:09.05.02 ಮತ್ತು ಮೂಲ ದಾವಾ ಸಂಖ್ಯೆ: 50:02-03 ತೀರ್ಪು ದಿನಾಂಕ:21.05.02 ಇವುಗಳನ್ನು ಗಮನಿಸಿದೆ.
2) ಅಮಲ್ಜಾರಿ ಪ್ರಕರಣ ಸಂಖ್ಯೆ:107:02-03 ದಿನಾಂಕ: 24.10.02 ಮತ್ತು 219:02-03 ದಿನಾಂಕ: 30.11.02 ಮತ್ತು 258: 02-03 ದಿನಾಂಕ: 30.11.02 ಕಾರ್ಯದರ್ಶಿ ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ. ಶಿರಾಳಕೊಪ್ಪ ಇವರು ಹೊಂದಿರುವ.
3) ಮಾರಾಟಾಧಿಕಾರಿಗಳು ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರ ಪ್ರಸ್ತಾವನೆ ಪತ್ರ ಸಂಖ್ಯೆ:56:2003-04 ದಿನಾಂಕ: 6.5.2003.
4) ಈ ಕಛೇರಿಯ ಪತ್ರ ಆದೇಶ ಸಮ ಸಂಖ್ಯೆ: ದಿನಾಂಕ: 6.6.03.
5) ಕಾರ್ಯದರ್ಶಿ ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರ ಪತ್ರ ಸಂಖ್ಯೆ:249:2003-04 ದಿನಾಂಕ: 01.08.03.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ(3)ರ ಪತ್ರದ ಮೂಲಕ ಬಂದಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ ಉಲ್ಲೇಖ(4)ರ ಈ ಕಛೇರಿಯ ಪತ್ರ ಆದೇಶದ ಮೂಲಕ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶವನ್ನು ನೀಡಲಾಗಿತ್ತು. ಆದರೆ ಉಲ್ಲೇಖ(5)ರ ಪತ್ರದ ಮೂಲಕ ಬಂದಿರುವ ಪತ್ರದ ಸಾರಾಂಶವನ್ನು ಗಮನಿಸಲಾಗಿ, ಉಲ್ಲೇಖ(4)ರ ಆದೇಶದ ಮೂಲಕ ನೀಡಿರುವ ನಮೂನೆ-10ರಲ್ಲಿ ಶ್ರೀ ಬಸವರಾಜ ವಾಲಿ ಬಿನ್ ಪುಟ್ಟಪ್ಪ ವಾಲಿ ಎಂಬುದರ ಬದಲಿಗೆ ಶ್ರೀ ಬಸವರಾಜ ವಾಲಿ ಬಿನ್ ನಾಗಪ್ಪ ಎಂದು ತಪ್ಪಾಗಿ ಬೆರಳಚ್ಚು ಆಗಿರುವುದರಿಂದ, ಸದ್ರಿ ದೋಷವನ್ನು ಸರಿಪಡಿಸಿ ಮಾರ್ಪಾಡು ಮಾಡಿ ನಮೂನೆ-10ನ್ನು ನೀಡಲು ಉಲ್ಲೇಖ(5)ರ ಪತ್ರದ ಮೂಲಕ ವಿನಂತಿಸಿಕೊಂಡಿರುತ್ತಾರೆ. ಈ ಕಛೇರಿಯ ಆದೇಶ ಮತ್ತು ನಮೂನೆ-10ನ್ನು ಗಮನಿಸಲಾಗಿ, ಮೇಲ್ಕಂಡ ದೋಷ ಇರುವುದು ಕಂಡುಬಂದಿದೆ. ಪ್ರಯುಕ್ತ ತಿದ್ದುಪಡಿ ಆದೇಶದೊಂದಿಗೆ ನಮೂನೆ-10ನ್ನು ಸರಿಪಡಿಸಿ ತಿದ್ದುಪಡಿ ಆದೇಶ ಹೊರಡಿಸಿದೆ.

**ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಮಾರ್ಪಾಡು ಆದೇಶ**

**ಕ್ರ.ಸಂಖ್ಯೆ: ಸಸಂಸನಿ-25:ಅಮಲ್ಜಾರಿ:ಸಿಆರ್-18:2003-04:2358, ದಿನಾಂಕ: 19ನೇ ಆಗಸ್ಟ್, 2003**

ಉಲ್ಲೇಖ(4)ರ ಈ ಕಛೇರಿಯ ಆದೇಶಕ್ಕೆ ಲಗತ್ತಿಸಿರುವ ನಮೂನೆ-10ರಲ್ಲಿ ಶ್ರೀ ಬಸವರಾಜ ವಾಲಿ ಬಿನ್ ನಾಗಪ್ಪ ಎಂಬುದರ ಬದಲಿಗೆ ಶ್ರೀ ಬಸವರಾಜವಾಲಿ ಬಿನ್ ಪುಟ್ಟಪ್ಪ ವಾಲಿ ಎಂದು ಸರಿಪಡಿಸಿ ಈ ಆದೇಶ ಹೊರಡಿಸಿದೆ. ಈ ಆದೇಶ ಮತ್ತು ನಮೂನೆ-10ರ ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲು ಈ ಮೂಲಕ ಕೋರಿದೆ.

ನನ್ನ ಸಹಿ ಮತ್ತು ಕಾರ್ಯಾಲಯದ ದುಂಡು ಮುದ್ರೆಯೊಂದಿಗೆ: ದಿನಾಂಕ:19.8.2003ರಂದು ಈ ಮಾರ್ಪಾಡು ಆದೇಶ ನೀಡಿರುತ್ತೇನೆ.

**ಶ್ರೀ ಜಿ.ವಿ. ಬಸವರಾಜು**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸಾಗರ ಉಪವಿಭಾಗ, ಸಾಗರ.

**FORM NO.10**

**Certificate of sale issued under Sub-rule (7) of Rule 38 of the Rules framed under the Karnataka Co-operative Societies Act of 1959**

**Name:** Secretary, Sri Basaveshwara Pattana Sahakara Bank Ltd., Shiralkoppa, Shikaripura Taluk, Shimoga District.

Assistant Registrar of Co-operative Societies Sagar Sub Division, Sagar, Shimoga District.

Execution Petition Nos.
1) 107/2002-03 Dated: 24-10-02
2) 219/2002-03 Dated: 30-11-02
3) 258/2002-03 Dated: 30-11-02

Secretary Sri Basaveshwara Pattana Sahakara Bank Ltd., Shiralkoppa, Shikaripura Tq: …………Decree Holder

V/s

Sri H. Chandrashekhar S/o Nagappa (Deceased) Rep. by Legal representative Smt. Vijalakshmi W/o Chandrashekar, Kumbarakeri, Shiralkoppa. ……………Defaulter

This is to certify that Sri Basavaraja Wali S/o Puttappa Wali, caste: Lingayath, Religion: Hindu, cultivator (Profession) residing in the village of Kumbarakeri, Shiralkoppa of Shikaripura Taluk in the Shimoga District has Purchased at Kumbarakeri, Shiralkoppa a Public auction held by one of the sale officers of Sri Basaveshwara Pattana Sahakara Bank Ltd., Shiralkoppa Shimoga District the undermentioned immovable property sold for arrears due to Secretary Sri Basaveshwara Pattana Sahakara Bank Ltd., Shiralkoppa by Sri H. Chandrashekara S/o Nagappa (deceased) legal representative, Smt. Vijalakshmi W/o Chandrashekhara and others, caste: Lingayath, religion: Hindu, land-holder (Profession) in the village of Kumbarakeri, Shiralkoppa of Shikaripura Taluk in Shimoga District in execution of decree/award/decision/order Nos. 1) 1580/01-02 Dated: 29-01-02, 2) 24/02-03 Dated: 09-05-02, 3)50/02-03 Dated: 21-05-2002 on the file of Assistant Registrar of Co-operative Societies, Sagar Sub Division, Sagar and has paid the full amount of the Purchase money, viz. Rs. 1,38,100-00 and that the sale has been duly confirmed by me on 6th day of June, 2003.

Assistant Registrar of Co-operative Societies,
Sagar Sub-Division, Sagar.

**SCHEDULE OF PROPERTIES**

1. Registration district : Shimoga
2. Registration Sub-District : Sagar
3. Taluk : Shikaripura
4. Village : Shiralkoppa

Description of properties (boundaries)
East: Sri Myalarappa's House
West: Sri Narayanappa's House
North: Conservancy Road
South: Road.
Khathe No: 1611, Assessment No: 1754.
Measurement 17x90 feet (Mangalore tiles house 17x 17) site Assessment Rs. 56-85
Sale Price for lot Rs. 1,38,100-00
Date of Sale: 28.03.03.
Given under my hand and seal this 6th day of June 2003.

Assistant Registrar of Co-operative Societies,
Sagar Sub-Division, Sagar.

PR-992

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಜಿಲ್ಲೆ, ಉಪ ವಿಭಾಗ-1, ಬೈಂದೂರ್‌ವೆಲ್ ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-32/2003(ಎಫ್) ದಿನಾಂಕ: 1ನೇ ಆಗಸ್ಟ್, 2003**

**ಅರ್ಜಿದಾರರು:**

1. ಶ್ರೀ ನಂಜೇಗೌಡ @ ನಂಜಪ್ಪಗೌಡ
S/o ಲೇಟ್ ಪಾಪಣ್ಣ,
R/o ಸರ್ಕಾರಿ ಪ್ರೈಮರಿ ಸ್ಕೂಲ್‌ಬಳಿ,
ಹನುಮೇನಹಳ್ಳಿ, ಸೋಮಾಪುರ ಅಂಚೆ,
ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರತಿವಾದಿಗಳು:**

1. ಶ್ರೀ ರೊನಾಲ್ಡ್ ಮೊಂತೆರೋ,
S/o ಅಬ್ರಹಾಂ ಮೊಂತೆರೋ, ಬೊಳ್ಳಿಹೌಸ್, ಅದಂಕುದ್ರು,
ಪೆರ್ಮನ್ನೂರು ಗ್ರಾಮ ಮತ್ತು ಅಂಚೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ನಂಜೇಗೌಡ @ ನಂಜಪ್ಪಗೌಡ ಇವರು ತಮ್ಮ ಮಗನಾದ ಶ್ರೀ ಪರಮೇಶ್ವರ ರಾಜು ಇವರು 1ನೇ ಪ್ರತಿವಾದಿಗಳಾದ ಶ್ರೀ ರೊನಾಲ್ಡ್ ಮೊಂತೆರೋ ಮಂಗಳೂರು, ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 24.06.2003ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ, ಆಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎನ್.ಬಿ. ರಾಮಚಂದ್ರ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದ.ಕ. ಉಪ ವಿಭಾಗ-1, ಮಂಗಳೂರು.

ಪಿ.ಆರ್. 993

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಜಿಲ್ಲೆ, ಬೈಂದೂರ್‌ವೆಲ್ ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-31/2003(ಎಫ್) ದಿನಾಂಕ: 1ನೇ ಆಗಸ್ಟ್, 2003**

**ಅರ್ಜಿದಾರರು:**

1. ಶ್ರೀಮತಿ ಜಲಜ ಮತ್ತು ಇತರರು,
W/o ಲೇಟ್ ಭುಜಂಗ,
R/o ರಾಧಾಕೃಷ್ಣ ಭಜನಾಮಂದಿರದ ಬಳಿ, ಕಿನ್ನಿಕಂಬ್ಳ ಅಂಚೆ,
ಮಂಗಳೂರು.

**ಪ್ರತಿವಾದಿಗಳು:**

1. ಪ್ರೇಮಲತಾ,
W/o ಗೋಪಾಲಕೃಷ್ಣ,
ವಾಸ: "ಸಂತೃಪ್ತಿ" ಕೈಕಂಬ, ಕಿನ್ನಿಕಂಬ್ಳಿ, ಮಂಗಳೂರು.
2. ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಪಿ.ಎಂ. ರಾವ್ ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಜಲಜ ಇವರು ತಮ್ಮ ಗಂಡನಾದ ಶ್ರೀ ಭುಜಂಗ ಇವರು 1ನೇ ಪ್ರತಿವಾದಿಗಳಾದ ಶ್ರೀಮತಿ ಪ್ರೇಮಲತಾ, ಕಿನ್ನಿಕಂಬ್ಳಿ, ಮಂಗಳೂರು, ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 21.06.2003ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎನ್.ಬಿ. ರಾಮಚಂದ್ರ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 994

**ಕೃಷಿ ನಿರ್ದೇಶಕರು, ಬೆಂಗಳೂರು ಇವರ ನಡವಳಿ**

**ವಿಷಯ:** ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಬ್ಬಿ, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ.

**ಉಲ್ಲೇಖ:**
1) ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರ ಪತ್ರ ಸಂಖ್ಯೆ: ಜಕೃನಿ/ಆಡಳಿತ-1/ವಿಚಾರಣೆ/48/2000-01, ದಿನಾಂಕ: 29.01.2001.
2) ಉದಯವಾಣಿ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆ ದಿನಾಂಕ: 05.04.2001.
3) ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ: 25.04.2001.
4) ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರ ಪತ್ರ ಸಂಖ್ಯೆ: ಜಕೃನಿ/ತು/ಆಡಳಿತ-1/ವಿಚಾರಣೆ/48/2000-01, ದಿನಾಂಕ:28.06.2001.
5) ಈ ಕಛೇರಿಯ ಇದೇ ಕ್ರಮಾಂಕದ ಕಾರಣ ತೋರುವ ಸೂಚನಾ ಪತ್ರ ದಿನಾಂಕ: 10.08.2001
6) ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರ ಪತ್ರ ಸಂಖ್ಯೆ:ಜಕೃನಿ/ತು/ಆಡಳಿತ-1/ವಿಚಾರಣೆ/48/2000-01, ದಿನಾಂಕ:03.09.2001

7) ಈ ಕಛೇರಿಯ ಇದೇ ಕ್ರಮಾಂಕದ ಆದೇಶ ದಿನಾಂಕ: 24.11.2001.
8) ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರ ಪತ್ರ ಸಂಖ್ಯೆ: ಆಡಳಿತ-1/ವಿಚಾರಣೆ/48/2000-01, ದಿನಾಂಕ: 18.3.2002.
9) 'ಕನ್ನಡ ಪ್ರಭ' ಹಾಗೂ 'ಜನವಾಹಿನಿ' ದಿನಪತ್ರಿಕೆ ದಿನಾಂಕ:21.11.2002.
10) ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ: 13.01.2002.
11) ಸಹಾಯಕ ಕೃಷಿ ನಿರ್ದೇಶಕರು, ಗುಬ್ಬಿ ಇವರ ಪತ್ರ ಸಂಖ್ಯೆ:ಸಕೃನಿಗು/ಆಡಳಿತ/ಕೃಸ/ಅಗೈಹಾ/ಮಾಹಿತಿ/1217/2002-03, ದಿನಾಂಕ:18.01.2003.

**ಪ್ರಸ್ತಾವನೆ:**

ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಬ್ಬಿ, ಇವರು ಮಗಳ ಅನಾರೋಗ್ಯದ ಕಾರಣದ ಮೇಲೆ ದಿನಾಂಕ: 25.06.90ರಂದು ರಜೆಯ ಮೇಲೆ ತೆರಳಿ ದಿನಾಂಕ: 15.02.91ರವರೆಗೆ ರಜೆಯನ್ನು ಮುಂದುವರೆಸಿಕೊಂಡು ಮುಂದೆ ಯಾವುದೇ ರಜೆಯ ಅರ್ಜಿಯನ್ನು ಸಲ್ಲಿಸದೇ ಇದುವರೆವಿಗೂ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಸಂಬಂಧ ಸದರಿಯವರ ಕೇಂದ್ರಸ್ಥಾನ ಹಾಗೂ ಸ್ವಂತ ಊರಿನ ವಿಳಾಸಕ್ಕೆ ಕಳುಹಿಸಿದ ಎಲ್ಲಾ ನೋಟೀಸುಗಳು ಹಾಗೂ ದೋಷಾರೋಪಣಾ ಪಟ್ಟಿಗಳು ಸದರಿಯವರಿಂದ ಸ್ವೀಕೃತವಾಗದೇ ವಾಪಸ್ ಬಂದಿರುತ್ತವೆ ಎಂದು ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರು ಓದಲಾದ ಕ್ರಮಸಂಖ್ಯೆ: (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

15 ದಿನಗಳ ಒಳಗಾಗಿ ಕರ್ತವ್ಯಕ್ಕೆ ಹಾಜರಾಗುವುದಲ್ಲದೆ ಅನಧಿಕೃತ ಗೈರು ಹಾಜರಿ ಸಂಬಂಧ ನಿಮ್ಮ ವಿರುದ್ಧ ಮಾಡಲಾದ ದೋಷಾರೋಪಣಾ ಪಟ್ಟಿಗಳನ್ನು ಖುದ್ದಾಗಿ ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರಿಂದ ಪಡೆದು ನಿಮ್ಮ ಹೇಳಿಕೆಯನ್ನು ಸಲ್ಲಿಸತಕ್ಕದ್ದು. ಇಲ್ಲವಾದಲ್ಲಿ, ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಪರಿಗಣಿಸಿ ಮುಂದಿನ ಕ್ರಮ ಜರುಗಿಸಲಾಗುವುದು ಎಂದು ಓದಲಾದ ಕ್ರಮಸಂಖ್ಯೆ: (2)ರ ದಿನಪತ್ರಿಕೆಗಳಲ್ಲಿ ಸದರಿ ನೌಕರರಿಗೆ ಪ್ರಕಟಣೆ ನೀಡಲಾಗಿತ್ತು.

ಓದಲಾದ ಕ್ರಮಸಂಖ್ಯೆ: (2)ರ ದಿನಪತ್ರಿಕೆಗಳಲ್ಲಿ ಪ್ರಕಟಿಸಿದಂತೆ ಸದರಿ ನೌಕರರು ಕರ್ತವ್ಯಕ್ಕೆ ಹಾಜರಾದ ಬಗ್ಗೆ ವರದಿ ಸಲ್ಲಿಸುವಂತೆ ಒಂದು ವೇಳೆ ಸದರಿ ನೌಕರರು ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಪೂರಕ ದಾಖಲಾತಿಗಳೊಂದಿಗೆ ದೋಷಾರೋಪಣಾ ಪಟ್ಟಿಗಳನ್ನು ಕಳುಹಿಸಿಕೊಡುವಂತೆ ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರಿಗೆ ಈ ಕಛೇರಿಯ ಓದಲಾದ ಕ್ರಮಸಂಖ್ಯೆ: (3)ರ ಪತ್ರದಲ್ಲಿ ಸೂಚಿಸಲಾಗಿತ್ತು.

ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಇವರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಈ ಬಗ್ಗೆ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರು ಓದಲಾದ ಕ್ರಮಸಂಖ್ಯೆ: (4)ರ ಪತ್ರದಲ್ಲಿ ದೋಷಾರೋಪಣಾ ಪಟ್ಟಿಗಳನ್ನು ಕಳುಹಿಸಿರುತ್ತಾರೆ.

ಇದರ ಮೇರೆಗೆ ಈ ಕಛೇರಿಯ ಓದಲಾದ ಕ್ರಮಸಂಖ್ಯೆ: (5)ರ ಕಾರಣ ತೋರುವ ಸೂಚನಾ ಪತ್ರದೊಂದಿಗೆ ಸದರಿಯವರ ವಿರುದ್ಧದ ದೋಷಾರೋಪಣಾ ಪಟ್ಟಿ (ಅನುಬಂಧ-1 ರಿಂದ 4 ರವರೆಗೆ)ಗಳನ್ನು ಸದರಿ ನೌಕರರಿಗೆ ಜಾರಿ ಮಾಡುವಂತೆ ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರಿಗೆ ಕಳುಹಿಸಿಕೊಡಲಾಗಿತ್ತು.

ಕೃಷಿ ನಿರ್ದೇಶನಾಲಯದಿಂದ ಕಳುಹಿಸಿಕೊಡಲಾದ ಸೂಚನಾ ಪತ್ರ ಹಾಗೂ ದೋಷಾರೋಪಣಾ ಪಟ್ಟಿಗಳನ್ನು ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಇವರಿಗೆ ಜಾರಿ ಮಾಡುವಂತೆ ಕಛೇರಿಯ ಸಿಬ್ಬಂದಿಯೊಂದಿಗೆ ಮುದ್ದಾಂ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಬ್ಬಿ ಇಲ್ಲಿಗೆ ಕಳುಹಿಸಿಕೊಡಲಾಗಿತ್ತು. ಸದರಿ ನೌಕರರು ಕಛೇರಿಗೆ ಅನಧಿಕೃತ ಗೈರು ಹಾಜರಿ ಆದ ಪ್ರಯುಕ್ತ ದೋಷಾರೋಪಣಾ ಪಟ್ಟಿಗಳನ್ನು ಅವರ ಸ್ವಗ್ರಾಮಕ್ಕೆ ಕಳುಹಿಸಿಕೊಡಲಾಗಿದ್ದು, ಅಲ್ಲಿಯೂ ಅವರು ಲಭ್ಯವಿರುವುದಿಲ್ಲ. ಸದರಿಯವರು 10 ವರ್ಷಗಳಿಂದ ಸ್ವಗ್ರಾಮದಲ್ಲಿ ಇರುವುದಿಲ್ಲವೆಂದು ಅವರ ತಾಯಿಯು ತಿಳಿಸಿರುತ್ತಾರೆ. ಈ ಕಾರಣದಿಂದ ಸದರಿ ನೌಕರರಿಗೆ ಸೂಚನಾ ಪತ್ರ ಹಾಗೂ ದೋಷಾರೋಪಣಾ ಪಟ್ಟಿಗಳನ್ನು ಜಾರಿ ಮಾಡಲು ಆಗಲಿಲ್ಲವೆಂದು ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರು ಓದಲಾದ ಕ್ರಮ ಸಂಖ್ಯೆ: (6)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಆದರೂ ಸದರಿ ಪ್ರಕರಣದ ಬಗ್ಗೆ ವಿಚಾರಣೆಯಿಂದ ಸತ್ಯಾಂಶವನ್ನು ತಿಳಿಯಲು ನಿರ್ಧರಿಸಿ ಈ ಕಛೇರಿಯ ಓದಲಾದ ಕ್ರಮಸಂಖ್ಯೆ: (7)ರ ಆದೇಶದಲ್ಲಿ ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಆಡಳಿತ ಸಹಾಯಕರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ತುಮಕೂರು, ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ವಿಚಾರಣೆಗೆ ಹಾಜರಾಗುವಂತೆ ಸದರಿ ನೌಕರರಿಗೆ ಅವರ ಸ್ವಗ್ರಾಮ ವಿಳಾಸಕ್ಕೆ ಅಂಚೆ ಮೂಲಕ ಕಳುಹಿಸಿದ ಸೂಚನಾ ಪತ್ರವು ವಿಳಾಸದಾರರು ಊರನ್ನು ಬಿಟ್ಟು ಹೋಗಿದ್ದಾರೆ ಎಂಬ ಹಿಂಬರಹದೊಂದಿಗೆ ವಾಪಾಸ್ ಬಂದಿರುತ್ತದೆ. ಅಲ್ಲದೆ, ಸಹಾಯಕ ಕೃಷಿ ನಿರ್ದೇಶಕರು, ಗುಬ್ಬಿ ಇವರ ಮೂಲಕ ಜಾರಿ ಮಾಡಲು ಕಳುಹಿಸಲಾಗಿದ್ದ ಸೂಚನಾ ಪತ್ರವು ಸದರಿ ನೌಕರರು ಸುಮಾರು 11 ವರ್ಷಗಳಿಂದ ನಾಪತ್ತೆಯಾಗಿದ್ದಾರೆ ಎಂದು ಗ್ರಾಮದ ಪ್ರಮುಖರ ಸಮ್ಮುಖದಲ್ಲಿ ನಡೆಸಲಾದ ಮಹಜರ್‌ನೊಂದಿಗೆ ಸಹಾಯಕ ಕೃಷಿ ನಿರ್ದೇಶಕರು, ಗುಬ್ಬಿ ಇವರು ವರದಿ ಮಾಡಿರುತ್ತಾರೆ. ಅಲ್ಲದೆ ಸದರಿ ನೌಕರರ ಕುಟುಂಬ ಸದಸ್ಯರು ಕಛೇರಿಗೆ ಭೇಟಿ ನೀಡಿ ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಇವರು 10 ವರ್ಷಗಳಿಂದ ಕಾಣೆಯಾಗಿರುವುದಾಗಿ ಲಿಖಿತ ಹೇಳಿಕೆ ನೀಡಿರುತ್ತಾರೆಂದು ತಿಳಿಸಿ ಸದರಿಯವರು ಖುದ್ದು ವಿಚಾರಣೆಗೆ ಲಭ್ಯವಿಲ್ಲದೇ ಇರುವುದರಿಂದ ವಿಚಾರಣೆ ನಡೆಸಲು ಸಾಧ್ಯವಿಲ್ಲವೆಂದು ಜಂಟಿ ಕೃಷಿ ನಿರ್ದೇಶಕರು, ತುಮಕೂರು, ಇವರು ಓದಲಾದ ಕ್ರಮಸಂಖ್ಯೆ: (8)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಓದಲಾದ ಕ್ರಮಸಂಖ್ಯೆ: (2)ರ ದಿನಪತ್ರಿಕೆಗಳಲ್ಲಿ ಪ್ರಕಟಿಸಲಾದ ವಿಷಯ ಹಾಗೂ ಜಂಟಿ ಕೃಷಿ ನಿರ್ದೇಶಕರು, ತುಮಕೂರು ಇವರ ಓದಲಾದ ಕ್ರಮಸಂಖ್ಯೆ: (8)ರ ಪತ್ರದಲ್ಲಿ ತಿಳಿಸಿರುವ ವಿಷಯವೂ ಸೇರಿದಂತೆ ಓದಲಾದ ಕ್ರಮಸಂಖ್ಯೆ: (9)ರ ದಿನಪತ್ರಿಕೆಗಳಲ್ಲಿ ಪ್ರಕಟಿಸಿ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ಹಾಜರಾಗುವುದಲ್ಲದೆ, ಅನಧಿಕೃತ ಗೈರು ಹಾಜರಿ ಸಂಬಂಧ ನಿಮ್ಮ ವಿರುದ್ಧ ಮಾಡಲಾದ ದೋಷಾರೋಪಣಾ ಪಟ್ಟಿಗಳನ್ನು ಖುದ್ದಾಗಿ ಕೃಷಿ ಆಯುಕ್ತರ ಕಾರ್ಯಾಲಯ, ಬೆಂಗಳೂರು, ಇಲ್ಲಿ ಪಡೆದು ನಿಮ್ಮ ಹೇಳಿಕೆ ಸಲ್ಲಿಸತಕ್ಕದ್ದು. ಇಲ್ಲವಾದಲ್ಲಿ ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಪರಿಗಣಿಸಿ ಏಕಪಕ್ಷೀಯವಾಗಿ ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ಸದರಿ ನೌಕರರಿಗೆ ಪ್ರಕಟಣೆ ನೀಡಲಾಗಿತ್ತು.

ಓದಲಾದ ಕ್ರಮಸಂಖ್ಯೆ: (9)ರ ದಿನಪತ್ರಿಕೆಗಳಲ್ಲಿ ಪ್ರಕಟಿಸಿದಂತೆ ಸದರಿ ನೌಕರರಿಗೆ ನೀಡಲಾಗಿದ್ದ 15 ದಿನಗಳ ಕಾಲಾವಕಾಶ ಮುಗಿದಿದ್ದರೂ ಸದರಿ ನೌಕರರು ಇದುವರೆವಿಗೂ ಅವರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು ಕೃಷಿ ಆಯುಕ್ತರ ಕಾರ್ಯಾಲಯಕ್ಕೆ ಬಂದು ಪಡೆದಿರುವುದಿಲ್ಲ. ಒಂದು ವೇಳೆ ಸದರಿಯವರು ಕರ್ತವ್ಯಕ್ಕೆ ಹಾಜರಾಗಿದ್ದಲ್ಲಿ, ಈ ಬಗ್ಗೆ ವರದಿ ಮಾಡುವಂತೆ ಈ ಕಛೇರಿಯ ಓದಲಾದ ಕ್ರಮಸಂಖ್ಯೆ: (10)ರ ಪತ್ರದಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಗುಬ್ಬಿ ಇವರಿಗೆ ಸೂಚನೆ ನೀಡಲಾಗಿತ್ತು.

ಸದರಿ ನೌಕರರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಸಹಾಯಕ ಕೃಷಿ ನಿರ್ದೇಶಕರು, ಗುಬ್ಬಿ ಇವರು ಓದಲಾದ ಕ್ರಮಸಂಖ್ಯೆ: (11)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಹೀಗೆ ಸದರಿ ಆಪಾದಿತ ನೌಕರರಿಗೆ ಎಲ್ಲಾ ರೀತಿಯಿಂದಲೂ ಅವಕಾಶ/ತಿಳುವಳಿಕೆ ನೀಡಿದ್ದಾಗ್ಯೂ ಕರ್ತವ್ಯಕ್ಕೆ/ ವಿಚಾರಣೆಗೆ ಹಾಜರಾಗಿರುವುದಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಮಾಡಲಾದ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿದೆ ಎಂದೇ ನಿರ್ಧರಿಸಿ ಸದರಿಯವರನ್ನು ಆರೋಪಿ ಎಂದು ಪರಿಗಣಿಸಿ ಕೆ.ಸಿ.ಎಸ್. (ಸಿಸಿಎ) 1957ರ ನಿಯಮ 8ರಡಿಯಲ್ಲಿ ದಂಡನೆ ವಿಧಿಸಲು ನಿರ್ಧರಿಸಿ ಈ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಇಎಸ್‌ಟಿ-1/ಐಎನ್‌ಕ್ಯೂ(1)/39/2000-01, ದಿನಾಂಕ: 10ನೇ ಮಾರ್ಚ್, 2003**

ಈ ಕೆಳಗೆ ಸಹಿ ಮಾಡಿರುವ ಜಿ. ಪ್ರಕಾಶ್, ಕೃಷಿ ನಿರ್ದೇಶಕರು, ಬೆಂಗಳೂರು, ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಬ್ಬಿ, ಇವರನ್ನು ಆರೋಪಿ ಎಂದು ಪರಿಗಣಿಸಿ ಆದೇಶಿಸಿರುತ್ತೇನೆ.

ಕೆ.ಸಿ.ಎಸ್. (ಸಿಸಿಎ) 1957ರ ನಿಯಮಗಳ ನಿಯಮ 8(vii) ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ಚಿಕ್ಕನರಸಯ್ಯ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಬ್ಬಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿರುತ್ತೇನೆ.

ಸದರಿ ನೌಕರರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಅನಧಿಕೃತ ಗೈರು ಹಾಜರಿ ಅವಧಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

ಪಿ.ಆರ್. 995 ಕೃಷಿ ನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಗಳು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ**

**ಅಧಿಸೂಚನೆ ಸಂಖ್ಯೆ: ಅಮೊ.ವಾಹನ/ 2003-04**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ: | ಯಂತ್ರದ ಸಂಖ್ಯೆ: | ಚಾಸೀಸ್ ಸಂಖ್ಯೆ: |
|---|---|---|---|---|
| 1 | 2 | 3 | 4 | 5 |
| 1. | Tractor KA-27-T-8633, KA-27-T-8634 | 28/2003-04 | 39-1311-01HO6155 | QWTK31600113159 |
| 2. | Maruthi Van CTQ-973 | 51/2002 | 1003109 | ST.91-IN-727884 |
| 3. | Bajaj M-80- KA15-E-496 | 09/03-04 | 16C 165606 | ಕಾಣಿಸಿರುವುದಿಲ್ಲ. |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ
ಪಿ.ಆರ್. 996 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಸಹಕಾರ ಸಂಘಗಳ ಉಪ-ನಿಬಂಧಕರು-1 ಬೆಂಗಳೂರು ನಗರ ಜಿಲ್ಲೆ-1 ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ಕ್ರ. ಡಿಆರ್‌ಬಿ:1:ಚಿಟ್ಸ್:457:2003-04**

| **ವಾದಿ:** | | **ಪ್ರತಿವಾದಿಗಳು:** |
|---|---|---|
| 1. ಸನ್‌ಸಾಗರ ಚಿಟ್ಸ್ ಪ್ರೈವೇಟ್ ಲಿ. ನಂ.25:1:8ನೇ ಕ್ರಾಸ್, ಅಗ್ರಹಾರ ದಾಸರಹಳ್ಳಿ, ಬೆಂಗಳೂರು-79 ಇದರ ವ್ಯವಸ್ಥಾಪಕ ನಿರ್ದೇಶಕರು. | **ವಿರುದ್ಧ** | 1. ಶ್ರೀಮತಿ ಎ. ಪದ್ಮ ಕೋಂ ಲೇಟ್ ರಾಮಚಂದ್ರ.<br>2. ಶ್ರೀ ಆರ್. ಕಿರಣ ಬಿನ್ ಲೇಟ್ ರಾಮಚಂದ್ರ, ಇಬ್ಬರ ವಿಳಾಸವು ನಂ. 198, 2ನೇ ಮುಖ್ಯರಸ್ತೆ, 1ನೇ ಬ್ಲಾಕ್ ವಿದ್ಯಾರಣ್ಯಪುರ, ಬೆಂಗಳೂರು-97 ಇಲ್ಲಿನ ನಿವಾಸಿಗಳು. |

ಚೀಟಿ ನಿಧಿ ಕಾಯ್ದೆ ಕಲಂ 68(1)ರ ರೀತ್ಯಾ ಷರತ್ತಿಗೊಳಪಟ್ಟ ತೀರ್ಪಿನ ಪೂರ್ವ ಜಪ್ತಿ ಆದೇಶ.

ವಾದಿಯು ಈ ನ್ಯಾಯಾಲಯದಲ್ಲಿ ಚೀಟಿ ನಿಧಿ ಕಾಯ್ದೆ 1982ರ ಕಲಂ 64ರ ಮೇಲೆ ಪ್ರತಿವಾದಿಗಳ ವಿರುದ್ಧ ದಿನಾಂಕ:13.8.2003ರಂದು ದಾವಾ ಹೂಡಿ ಪ್ರತಿವಾದಿಗಳಿಂದ ರೂ. 3,39,479ನ್ನು ಮಾಹೆಯಾನ ಶೇ.3ರ ಬಡ್ಡಿ ದರದಲ್ಲಿ ವಸೂಲಿ ಮಾಡಲು ಆದೇಶ ನೀಡಬೇಕೆಂದು ಕೋರಿರುತ್ತಾರೆ. ವಾದಿಯು ತನ್ನ ಪರ ವಕೀಲರನ್ನು ನೇಮಿಸಿಕೊಳ್ಳಲು ಕಲಂ 67ರಲ್ಲಿ ಅರ್ಜಿ ಹಾಗೂ ಪ್ರತಿವಾದಿಗಳಿಗೆ ಸೇರಿದ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಚೀಟಿ ನಿಧಿ ಕಾಯ್ದೆ ಕಲಂ 68ರ ರೀತ್ಯಾ ಅರ್ಜಿ ಸಲ್ಲಿಸಿರುತ್ತಾರೆ. ಈ ದಾವೆ ವಿಚಾರಣೆಗಾಗಿ ತೆಗೆದುಕೊಳ್ಳಲಾಗಿದೆ.

ಈ ದಿನ ಪ್ರಕರಣವನ್ನು ವಿಚಾರಣೆಗೆ ಕೈಗೆತ್ತಿಕೊಳ್ಳಲಾಯಿತು ವಾದಿಯು ಹಾಜರಿದ್ದು ತಮ್ಮ ಪರ ವಕೀಲರನ್ನು ನೇಮಿಸಿಕೊಳ್ಳಲು ಕೋರಿಕೊಂಡಿರುವ ಅರ್ಜಿಯನ್ನು ಪರಿಗಣಿಸಲು ಕೋರಿರುತ್ತಾರೆ. ಅದನ್ನು ಒಪ್ಪಲಾಯಿತು. ವಾದಿ ಪರ ವಕೀಲರಾದ ಶ್ರೀ ಜಿ. ಜಯರಾಮರವರು ವಕಾಲತ್ತು ಸಲ್ಲಿಸಿರುತ್ತಾರೆ. ಅದನ್ನು ಒಪ್ಪಲಾಯಿತು ವಾದಿ ಪರ ವಕೀಲರು ಕಾಯ್ದೆ ಕಲಂ 68ರ ರೀತ್ಯಾ ತೀರ್ಪಿನ ಪೂರ್ವಜಪ್ತಿ ಆದೇಶ ಹೊರಡಿಸಲು ಕೋರಿ ಸಲ್ಲಿಸಿರುವ ಅರ್ಜಿಯ ಬಗ್ಗೆ ತಮ್ಮ ವಾದ ಮಂಡಿಸಿರುತ್ತಾರೆ. ಅದನ್ನು ಆಲಿಸಲಾಯಿತು.

ವಾದಿಯು ಕಲಂ 68ರ ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ಹಾಗೂ ವಾದಿ ಪರ ವಕೀಲರು ಮಂಡಿಸಿರುವ ತಮ್ಮ ವಾದದಲ್ಲಿ 1ನೇ ಪ್ರತಿವಾದಿಯು ವಾದಿ ಸಂಸ್ಥೆಯಲ್ಲಿ ಚೀಟಿ ಗುಂಪು ನಂ. ಎಸ್‌ಎಎನ್3-ಸಿಎಲ್:02:ಕ್ಕೆ ಚಂದಾದಾರರಾಗಿದ್ದು ಈ ಚೀಟಿಯ ಮುಖ್ಯ ಬೆಲೆ 3.00 ಲಕ್ಷಗಳಾಗಿದೆಯೆಂದು ಹೇಳಿರುತ್ತಾರೆ. 1ನೇ ಪ್ರತಿವಾದಿ ದಿನಾಂಕ: 13.2.2003ರಂದು ಚೀಟಿಯನ್ನು ಬಟವಾಡೆ ಪಡೆದಿದ್ದು ಈ ಬಗ್ಗೆ ವೋಚರ್ ಹಾಗೂ ಆನ್‌ಡಿಮ್ಯಾಂಡ್ ಪ್ರಾಮಿಸರಿನೋಟ ಬರೆದುಕೊಂಡಿದ್ದು ಬಿಡ್ ಹಣ ಬಾಕಿ ಉಳಿದ ಹಣ ರೂ. 2,27,800 ರೂ. ಪಡೆದಿದ್ದು ಈ ಬಗ್ಗೆ ಚೀಟಿ ಒಪ್ಪಿಗೆಯ ಪತ್ರದಲ್ಲಿ ಹೇಳಿದಂತೆ ನಡೆದುಕೊಳ್ಳದೇ ಮಾರ್ಚ್ 2003ರಿಂದ ಚೀಟಿ ಕಂತುಗಳನ್ನು ಪಾವತಿಸದೇ ಸುಸ್ತಿದಾರರಾಗಿದ್ದಾರೆಂದು ಹೇಳಿ ಈಗ ಅವರು ಹೊಂದಿರುವ ಷೆಡ್ಯೂಲ್ ಸ್ವತ್ತನ್ನು ಪರಭಾರೆ ಮಾಡಲು ಹವಣಿಸುತ್ತಿದ್ದಾರೆಂದು ಇದನ್ನು ಪರಭಾರೆ ಮಾಡಿದಲ್ಲಿ ಈ ದಾವೆಯಲ್ಲಿ ಹೊರಡಿಸಬಹುದಾದ ಆದೇಶದ ಪ್ರಕಾರ ಹಣ ವಸೂಲಿ ಮಾಡಿಕೊಳ್ಳಲು ಯಾವುದೇ ರಹಾ ಇಲ್ಲವೆಂದು ಹೇಳಿ ಪ್ರತಿವಾದಿಯ ಸ್ವತ್ತನ್ನು ಕಲಂ 68ರ ರೀತ್ಯಾ ತೀರ್ಪು ಪೂರ್ವ ಜಪ್ತು ಮಾಡಲು ಕೋರಿರುತ್ತಾರೆ. ಹಾಗೂ ಸ್ವತ್ತಿನ ಋಣಭಾರ ರಾಹಿತ್ಯ ದೃಢೀಕರಣ ಪತ್ರ ಹಾಜರುಪಡಿಸಿರುತ್ತಾರೆ.

ವಾದಿಯ ದಾವಾ ಅರ್ಜಿ, ಕಲಂ 68ರ ರೀತ್ಯಾ ಸಲ್ಲಿಸಿದ ಅರ್ಜಿ ಹಾಗೂ ವಾದಿಯ ಪರ ವಕೀಲರ ವಾದವನ್ನು ಪರಿಶೀಲಿಸಿದ ಪ್ರತಿವಾದಿಯು ತನ್ನ ಸ್ಥಿರಾಸ್ತಿಯನ್ನು ಪರಭಾರೆ ಮಾಡಿದಲ್ಲಿ ಇವರಿಂದ ವಾದಿಗೆ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ಅನುಷ್ಠಾನಗೊಳಿಸಲು ತೊಂದರೆಯಾಗುವ ಸಂದರ್ಭವಿದೆಯೆಂದು ದೃಢಪಟ್ಟಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಚೀಟಿ ನಿಧಿ ಕಾಯ್ದೆ 1982ರ ಕಲಂ 68(1)ರ ರೀತ್ಯಾ ಹಾಗೂ ಈ ಕೆಳಗೆ ಸಹಿದಾರರಿಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎ. ಕುಮಾರ್ ಸಹಕಾರ ಸಂಘಗಳ ಉಪ-ನಿಬಂಧಕರು-1 ಬೆಂಗಳೂರು ನಗರ ಜಿಲ್ಲೆ ಆದ ನಾನು ಪ್ರತಿವಾದಿಯ ಈ ಕೆಳಕಂಡ ಷೆಡ್ಯೂಲಿನ ಸ್ಥಿರಾಸ್ತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿಮಾಡಲು ಆದೇಶಿಸಿರುತ್ತೇನೆ. ಪ್ರತಿವಾದಿಗಳು ಈ ಜಪ್ತು ಆದೇಶವನ್ನು ತೆರವುಗೊಳಿಸಲು ಬಯಸಿದಲ್ಲಿ 3.39 ಲಕ್ಷ ರೂಗಳನ್ನು ಬೆಂಗಳೂರು ಡಿ.ಸಿ.ಸಿ. ಬ್ಯಾಂಕಿನ ಕೇಂದ್ರ ಶಾಖೆಯಲ್ಲಿ ಈ ಕೆಳಗೆ ಸಹಿ ಮಾಡಿದವರ ಹೆಸರಿನಲ್ಲಿ ಅಮಾನತ್ ಖಾತೆ ತೆಗೆದು ಹಣವನ್ನು ಠೇವಣಿ ಮಾಡಿ ಠೇವಣಿ ಮಾಡಿದ ಬಗ್ಗೆ ರಶೀದಿಯನ್ನು ಈ ಕೆಳ ಸಹಿದಾರರಿಗೆ ಈ ಆದೇಶ ಪಡೆದ 15 ದಿವಸಗಳೊಳಗಾಗಿ ಹಾಜರುಪಡಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಆದೇಶಿಸಿದೆ.

**ಷೆಡ್ಯೂಲ್ ಸ್ವತ್ತು:** ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ತಿಂಡ್ಲುಗ್ರಾಮದ ಬಿ.ಇ.ಎಲ್. ಬಡಾವಣೆಯಲ್ಲಿರುವ 60'x40' ರ ಅಳತೆಯ ನಿವೇಶನ ಹಾಗೂ ಮನೆ ಹೊಂದಿರುವ ಸ್ವತ್ತಿನ ಸಂಖ್ಯೆ: 198.

ಈ ಆದೇಶವನ್ನು ಈ ದಿನ ದಿನಾಂಕ: 18.8.2003ರಂದು ಬಹಿರಂಗ ನ್ಯಾಯಾಲಯದಲ್ಲಿ ಉಚ್ಚರಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು-1

ಪಿ.ಆರ್. 997

ಬೆಂಗಳೂರು ನಗರ ಜಿಲ್ಲೆ.

**GOVERNMENT OF KARNATAKA**
**COMMERCIAL TAXES DEPARTMENT**
**OFFICE OF THE COMMERCIAL TAX OFFICER, 28TH CIRCLE, BANGALORE**
**NOTIFICATION**
**No. T.No. 128/03-04, Bangalore, Dated: 22nd August, 2003**

It is hereby notified to the notice of general public that the statutory forms/declaration form issued to the dealer as detailed under is treated as invalid due to non-availability of the concerned assessee after obtaining the registration in this office. Any persons attempt to use the following statutory/declaration forms are themselves responsible for it further consequences.

| Sl. No. | Name of the assessee and Address with R.C. Number | Date of issue | Sl.No. of Form-37 declaration forms | Total number of forms (Invalid) |
|---|---|---|---|---|
| 1 | 2 | 3 | 4 | 5 |
| 1. | Anthara Cement Blocks,<br>No. 22, Gopalapura,<br>Behind Minerva Mill, Magadi Road, Bangalore-23.<br><br>**KST:** R.C. No. 97103408<br>R.C. Cancelled<br>w.e.f. 01-04-1998 | 07-04-1995 | 87416, 87418,<br>87419, 87421,<br>87422, 87423,<br>87425, 87426,<br>87427, 87428,<br>87429, 87434.<br>and<br>87435. | 13 Forms |

Commercial Tax Officer,
28th Circle, Bangalore.

PR-998

**ಜಿಲ್ಲಾ ದಂಡಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ತಿದ್ದುಪಡಿ ಪ್ರಕಟಣೆ**
**ಕ್ರ. ಎಂಎಜಿ(2)ಸಿಆರ್-665/101-02, ಶಿವಮೊಗ್ಗ, ದಿನಾಂಕ:3ನೇ ಜುಲೈ, 2003**

**ವಿಷಯ:** ಶಿವಮೊಗ್ಗ ನಗರದಲ್ಲಿ ವಾಹನಗಳ ವೇಗಮಿತಿಯನ್ನು ನಿಗದಿಗೊಳಿಸುವ ನಿಟ್ಟಿನಲ್ಲಿ ಪ್ರಕಟಣೆಯನ್ನು ಅಂತಿಮಗೊಳಿಸುವ ಬಗ್ಗೆ.

**ಉಲ್ಲೇಖ:** ಸಮ ಸಂಖ್ಯೆಯ ಪ್ರಕಟಣೆ ದಿನಾಂಕ: 31.12.2001 ಮತ್ತು 22.06.2002.

ವಿಷಯದ ಬಗ್ಗೆ ಈ ಕಾರ್ಯಾಲಯದ ಸಮಸಂಖ್ಯೆಯ ದಿನಾಂಕ: 22.06.2002ರ ಪ್ರಕಟಣೆಯು, **ರಾಜ್ಯಪತ್ರದ ಭಾಗ-3ರ ಪುಟ ಸಂಖ್ಯೆ:1576ರಲ್ಲಿ ದಿನಾಂಕ: 08.08.2002ರಂದು** ಪ್ರಕಟಗೊಂಡಿದ್ದು, ಸದರಿ ಪ್ರಕಟಣೆಯ ಪ್ಯಾರಾ 3,4, 5ನ್ನು ತಿದ್ದುಪಡಿಯೊಂದಿಗೆ ಓದಿಕೊಳ್ಳಲು ಆದೇಶಿಸಿದೆ.

| ರಾಜ್ಯಪತ್ರದಲ್ಲಿ ಈಗಾಗಲೇ ಪ್ರಕಟಗೊಂಡಿದ್ದು | ತಿದ್ದುಪಡಿ ನಂತರ ಪ್ರಕಟಗೊಳ್ಳಬೇಕಾಗಿದ್ದು |
|---|---|
| **ಪ್ಯಾರಾ-3:** ಸದರಿ ಪ್ರಕಟಣೆಗೆ ಸಂಬಂಧಿಸಿದಂತೆ ಸಂಘ ಸಂಸ್ಥೆಗಳು ಸೇರಿದಂತೆ ನಿಗದಿತ ಅವಧಿಯೊಳಗೆ ಆಟೋ ಚಾಲಕರ ಮತ್ತು ಮಾಲೀಕರ ಸಂಘ ಇವರಿಂದ ಬಂದ ಒಂದು ಆಕ್ಷೇಪಣೆ ಅರ್ಜಿಯಲ್ಲಿ, ಹಾಲಿ ಎನ್.ಎಲ್, ರಾವ್ ಮತ್ತು ಕೋ, ಹಾಗೂ ಸುರಭಿ ಹೋಟೆಲ್ ಬಳಿ ಇರುವ ಎರಡು ಕೋರಿಕೆಯ ನಿಲುಗಡೆಯ ನಡುವಿನ ಅಂತರ 100 ಮೀಟರ್ ಇದ್ದು ಮಧ್ಯದಲ್ಲಿ ಆಂಜನೇಯ ಸ್ವಾಮಿ ದೇವಸ್ಥಾನ ಮತ್ತು ಆಟೋ ರಿಕ್ಷಾ ನಿಲ್ದಾಣವಿದ್ದು, ಇಲ್ಲಿ ಸರದಿ ವಾಹನ ನಿಲುಗಡೆಗೆ ಸ್ಥಳಾವಕಾಶ ಕಡಿಮೆ ಇರುವುದರಿಂದ ಅದನ್ನು ಕೋರಿಕೆ ನಿಲುಗಡೆಯ ಹೊರಗೆ ಕೈಗೊಳ್ಳುವಂತೆ ಕೋರಿರುತ್ತಾರೆ. | ಉಲ್ಲೇಖಿತ ಪ್ರಸ್ತಾವನೆಯನ್ನು ಅಂತಿಮಗೊಳಿಸುವುದರ ಸಲುವಾಗಿ ಈ ಪ್ರಸ್ತಾವನೆಗಳ ಬಗ್ಗೆ ಸಾರ್ವಜನಿಕರು ಮತ್ತು ಸಂಘ ಸಂಸ್ಥೆಗಳಿಂದ ಆಕ್ಷೇಪಣೆ ಅಥವಾ ಸಲಹೆಗಳನ್ನು ಕರೆಯಲಾಗಿತ್ತು. ಈ ಪ್ರಕಟಣೆಯು ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ 30 ದಿನದೊಳಗಾಗಿ ಯಾವುದೇ ಆಕ್ಷೇಪಣೆ/ಸಲಹೆಗಳು ಈ ಕಾರ್ಯಾಲಯದಲ್ಲಿ ದಾಖಲಾಗಿಲ್ಲ. ಆದ್ದರಿಂದ ಸುಗಮ ಸುರಕ್ಷಿತ ವಾಹನ ಸಂಚಾರದ ದೃಷ್ಟಿಯಿಂದ ಮತ್ತು ಸಾರ್ವಜನಿಕರ ಹಿತವನ್ನು ಗಮನದಲ್ಲಿಟ್ಟು ಅನುಸೂಚಿಯಲ್ಲಿ ನಮೂದಿಸಿದ ಸ್ಥಳಗಳಲ್ಲಿ ವೇಗಮಿತಿ ನಿಗದಿಪಡಿಸಿ ಸೂಚನಾ ಫಲಕಗಳನ್ನು ಹಾಕಲು ಪ್ರಕಟಣೆಯನ್ನು ಅಂತಿಮಗೊಳಿಸಿ ಆದೇಶ ನೀಡಿದ್ದೇನೆ. |
| **ಪ್ಯಾರಾ-4:** ಈ ಬಗ್ಗೆ ದಿನಾಂಕ: 4.5.2002ರಂದು ಜಿಲ್ಲಾ ರಕ್ಷಣಾಧಿಕಾರಿಗಳ ಅಭಿಪ್ರಾಯವನ್ನು ಪಡೆಯಲಾಗಿದ್ದು, ಇತ್ತೀಚಿನ ದಿನಗಳಲ್ಲಿ ವಾಹನ ಸಂಚಾರ ಹೆಚ್ಚಾಗಿದ್ದು ಮುಖ್ಯರಸ್ತೆ ಕಿರಿದಾಗಿದ್ದರಿಂದ ಎರಡೂ ಬದಿಗಳಲ್ಲಿ ವಾಹನ ನಿಲುಗಡೆಯಿಂದ ವಾಹನ ಸಂಚಾರಕ್ಕೆ ಅಡಚಣೆ ಆಗುವುದರಿಂದ ಕೋರಿಕೆ ನಿಲುಗಡೆಯನ್ನು ರದ್ದುಗೊಳಿಸಿ ಸರದಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದಲ್ಲಿ ಸಾರ್ವಜನಿಕ ಹಾಗೂ ವಾಹನಗಳ ಸಂಚಾರಕ್ಕೆ ಅನುಕೂಲವಾಗುತ್ತದೆ ಎಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಮತ್ತು ವಾಸ್ತವಾಂಶದೊಂದಿಗೆ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. | **ಅನುಚೂಚಿ**<br>ಶಿವಮೊಗ್ಗ ನಗರಕ್ಕೆ ಹೊರ ಊರುಗಳಿಂದ ಬಂದು ನಗರ ವ್ಯಾಪ್ತಿಯಲ್ಲಿ ಸಂಚರಿಸುವ ಈ ಕೆಳಕಂಡ ರಸ್ತೆಗಳಲ್ಲಿ ವಾಹನಗಳ ವೇಗಮಿತಿಯನ್ನು 20 ಕಿ.ಮೀ.ಗೆ ನಿಗದಿಪಡಿಸಿ ನಾಮಫಲಕ ಹಾಕುವ ಬಗ್ಗೆ-<br>- ಭದ್ರಾವತಿಯಿಂದ ಬರುವ ಬಿ.ಹೆಚ್. ರಸ್ತೆ.<br>- ತೀರ್ಥಹಳ್ಳಿಯಿಂದ ಬರುವ ನ್ಯೂ ತೀರ್ಥಹಳ್ಳಿ ರಸ್ತೆ.<br>- ಸಾಗರದಿಂದ ಬರುವ ಬಿ.ಹೆಚ್. ರಸ್ತೆ.<br>- ಹೊನ್ನಾಳಿಯಿಂದ ಬರುವ ಸವಳಂಗ ರಸ್ತೆ.<br>- ಹೊನ್ನಾಳಿಯಿಂದ ಬರುವ ಶೇಷಾದ್ರಿಪುರಂ ರಸ್ತೆ.<br>- ಹೊಳೆಹೊನ್ನೂರುನಿಂದ ಬರುವ ಗುರುಪುರ ರಸ್ತೆ. |

| ರಾಜ್ಯಪತ್ರದಲ್ಲಿ ಈಗಾಗಲೇ ಪ್ರಕಟಗೊಂಡಿದ್ದು | ತಿದ್ದುಪಡಿ ನಂತರ ಪ್ರಕಟಗೊಳ್ಳಬೇಕಾಗಿದ್ದು |
|---|---|
| **ಪ್ಯಾರಾ-5:** ಸೊರಬ ಪಟ್ಟಣದಲ್ಲಿನ ಮುಖ್ಯ ರಸ್ತೆಯಲ್ಲಿ ಅತಿಯಾದ ವಾಹನ ಸಂಚಾರ ಮತ್ತು ರಸ್ತೆ ಕಿರಿದಾಗಿದ್ದರಿಂದ ಹಾಲಿ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆ ಮಾಡುತ್ತಿರುವುದನ್ನು ರದ್ದುಪಡಿಸಿ ಸಾರ್ವಜನಿಕ ಹಿತ, ಸುರಕ್ಷೆ ದೃಷ್ಟಿಯಿಂದ, ಮತ್ತು ಸುಗಮ ವಾಹನ ಸಂಚಾರ ದೃಷ್ಟಿಯಿಂದ ಸೊರಬ ಪಟ್ಟಣದ ಮುಖ್ಯ ರಸ್ತೆಯಲ್ಲಿ ಸರದಿ ವಾಹನ ನಿಲುಗಡೆ ಬಗ್ಗೆ ಆದೇಶ ಹೊರಡಿಸಿ ಪ್ರಕಟಣೆಯನ್ನು ಅಂತಿಮಗೊಳಿಸಲು ಆದೇಶ ನೀಡಿದೆ. | |

**ತುಷಾರ್ ಗಿರಿನಾಥ್**

ಪಿ.ಆರ್. 999 ಜಿಲ್ಲಾ ದಂಡಾಧಿಕಾರಿ, ಶಿವಮೊಗ್ಗ ಜಿಲ್ಲೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಕೆ.ಆರ್. ಸತ್ಯನಾರಾಯಣ, ಗ್ರೂಪ್ ಡಿ ನೌಕರರು, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿ ಪತ್ರದ ಸಂ.ಡಿಪಿಎಲ್(1):ಸಿಆರ್:17:96-97, ದಿನಾಂಕ: 20.07.98.
2) ನೌಕರರು ಲಿಖಿತ ಉತ್ತರ ಸಲ್ಲಿಸಿಲ್ಲ.
3) ವಿಚಾರಣಾಧಿಕಾರಿಯವರನ್ನು ನೇಮಿಸುವ ಆದೇಶ ಸಂಖ್ಯೆ: ಡಿಪಿಎನ್(11):ಸಿಆರ್:17:96-97, ದಿನಾಂಕ:10.11.2000.
4) ವಿಚಾರಣಾ ವರದಿಯ ಸಂಖ್ಯೆ: ವಿಅ:ವಿಚಾರಣೆ:ಎನ್‌ಜಿ:53:00-01, ದಿನಾಂಕ: 27.09.01.
5) ವಿಚಾರಣಾ ವರದಿ ನೌಕರನಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(11):ಸಿಆರ್:17:96-97, ದಿನಾಂಕ: 13.06.02, 10.02.03 ಮತ್ತು ದಿನಾಂಕ:29.04.03.
6) ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿಲ್ಲ ಲಕೋಟೆಯು ವಾಪಸ್ಸು ಬಂದಿರುತ್ತದೆ.

**ಪ್ರಸ್ತಾವನೆ:**

ಶ್ರೀ ಕೆ.ಆರ್. ಸತ್ಯನಾರಾಯಣ, ಗ್ರೂಪ್ ಡಿ ನೌಕರ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ದಿನಾಂಕ: 04.10.94 ರಿಂದ ಇಲ್ಲಿಯವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕನುಗುಣವಾಗಿ ನೌಕರರು ಲಿಖಿತ ಉತ್ತರವನ್ನು ಸಲ್ಲಿಸದೆ ಇರುವುದರಿಂದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿದ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿ (ಜಾ.ಕೋ) ಆಕುಕ ಸೇವೆಗಳು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದರ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಲಕೋಟೆ ವಾಪಸ್ಸು ಬಂದಿರುತ್ತದೆ. ನೌಕರರಿಗೆ ಜಾರಿಗೊಳಿಸಿದ್ದ ವಿಚಾರಣಾ ವರದಿಯ ಪ್ರತಿಯ ಲಕೋಟೆ ವಾಪಸ್ಸು ಬಂದಿರುವುದರಿಂದಲೂ ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(11):ಸಿಆರ್: 17-96-97, ಬೆಂಗಳೂರು, ದಿನಾಂಕ: 31ನೇ ಜುಲೈ, 2003**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಎಂ.ವಿ. ಮುರುಗೇಂದ್ರಪ್ಪ, ನಿರ್ದೇಶಕರು, ಆಕುಕ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಕೆ.ಆರ್. ಸತ್ಯನಾರಾಯಣ, ಗ್ರೂಪ್ ಡಿ ನೌಕರ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ, ಇವರು ಸರ್ಕಾರಿ ಸೇವೆಗೆ ದಿನಾಂಕ: 04.10.94 ರಿಂದ ಇಲ್ಲಿಯವರೆಗೆ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿರುವುದರಿಂದ ಸದರಿ ನಿಯಮಗಳು 8(8)ರ ಪ್ರಕಾರ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿದ್ದೇನೆ.

**ಡಾ: ಎಂ.ವಿ. ಮುರುಗೇಂದ್ರಪ್ಪ,**

ಪಿ.ಆರ್. 1000 ನಿರ್ದೇಶಕರು,

ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು.

**ಅಬಕಾರಿ ಇಲಾಖೆ**

**ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ರೀತ್ಯಾ ಇಲಾಖೆಯ ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳ ಸಂಕ್ಷಿಪ್ತ ವಿವರಣೆಗಳ ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅವರು ಅನುಸರಿಸುವ ಕಾರ್ಯವಿಧಾನ ಪ್ರಕಟಣೆ**

**1. ಅಬಕಾರಿ ಆಯುಕ್ತರ ಕಛೇರಿ:**

**(ಎ) ಅಬಕಾರಿ ಆಯುಕ್ತರು:**

ಇಲಾಖೆಯ ಮುಖ್ಯಸ್ಥರಾದ ಅಬಕಾರಿ ಆಯುಕ್ತರು ಇಲಾಖೆಯ ಅಧೀನಕ್ಕೊಳಪಡುವ ತಮ್ಮ ಕಛೇರಿಯ ಹಾಗೂ ಎಲ್ಲಾ ವಿಭಾಗೀಯ ಹಾಗೂ ಜಿಲ್ಲಾಮಟ್ಟದ ಕಛೇರಿಗಳ ಕಾರ್ಯನಿರ್ವಹಣೆಯ ನಿಯಂತ್ರಣಾಧಿಕಾರಿಯಾಗಿರುತ್ತಾರೆ. ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ಸೆಕ್ಷನ್ 7(1)(iii)ರ ರೀತ್ಯಾ ರಾಜ್ಯಮಟ್ಟದಲ್ಲಿ ಅಪೀಲು ಪ್ರಾಧಿಕಾರಿಯಾಗಿರುತ್ತಾರೆ.

**(ಬಿ) ಅಬಕಾರಿ ಜಂಟಿ ಆಯುಕ್ತರು, (ಕೇಂದ್ರಸ್ಥಾನ ಮತ್ತು ಆಡಳಿತ):**

ಅಬಕಾರಿ ಅಯುಕ್ತರ ಅಧೀನದಲ್ಲಿ ಇಲಾಖೆಯ ಸಂಪೂರ್ಣ ಆಡಳಿತ ಜವಾಬ್ದಾರಿಯನ್ನು ಅಬಕಾರಿ ಜಂಟಿ ಆಯುಕ್ತರು (ಆಡಳಿತ) ಇವರು ಹೊಂದಿದ್ದು, ಸರ್ಕಾರದ ನೀತಿ ಹಾಗೂ ನಿಯಮಾವಳಿಗಳ ರೀತ್ಯಾ ಇಲಾಖೆಯ ಕರ್ತವ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವ ಹೊಣೆಗಾರಿಕೆ ಇವರ ಮೇಲಿರುತ್ತದೆ. ಇವರು ಇಲಾಖೆಯ ಆಡಳಿತಾತ್ಮಕ ಕಾರ್ಯಚಟುವಟಿಕೆಗಳ ಗುಣಮಟ್ಟವನ್ನು ಹೆಚ್ಚಿಸುವ ಹಾಗೂ ಸರ್ಕಾರದ ನೀತಿ ನಿಯಮಾವಳಿಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿರುವ ಅಧಿಕಾರಿಯಾಗಿರುತ್ತಾರೆ. ಅಲ್ಲದೆ ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ಸೆಕ್ಷನ್ 2(ಎ)ರ ಅನ್ವಯ ರಾಜ್ಯಮಟ್ಟದಲ್ಲಿ ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ.

**(ಸಿ) ಡೆಪ್ಯುಟಿ ಕಮೀಷನರ್, (ಆಡಳಿತ):**

ಆಡಳಿತಾತ್ಮಕ ಕಾರ್ಯಚಟುವಟಿಕೆ ಮತ್ತು ನೀತಿ ನಿಯಮಾವಳಿಗಳನ್ನು ಕಾರ್ಯಗತಗೊಳಿಸುವ ಅಧಿಕಾರಿಯಾಗಿರುತ್ತಾರೆ.

**(ಡಿ) ಅಬಕಾರಿ ಜಂಟಿ ಆಯುಕ್ತರು:**

ಕೇಂದ್ರ ಕಛೇರಿಯಲ್ಲಿ ಮೇಲೆ ಕಾಣಿಸಿದ ಅಬಕಾರಿ ಜಂಟಿ ಆಯುಕ್ತರೂ, ಅಲ್ಲದೇ ಇಲಾಖೆಯ ಈರ್ವರು ಅಬಕಾರಿ ಜಂಟಿ ಆಯುಕ್ತರು ಕರ್ತವ್ಯ ನಿರ್ವಹಿಸುತ್ತಿದ್ದು, ಸರ್ಕಾರದ ನಿಯಮಾವಳಿ ಹಾಗೂ ಆದೇಶಗಳ ಅನ್ವಯ ಇಲಾಖೆಯ ಆಡಳಿತವನ್ನು ಅಬಕಾರಿ ಆಯುಕ್ತರು: ಅಬಕಾರಿ ಜಂಟಿ ಆಯುಕ್ತರು (ಆಡಳಿತ) ಇವರುಗಳು ಹಂಚಿಕೆ ಮಾಡುವ ಕರ್ತವ್ಯಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿರುವ ಅಧಿಕಾರಿಗಳಾಗಿರುತ್ತಾರೆ. ಅಬಕಾರಿ ಜಂಟಿ ಆಯುಕ್ತರು (ಡಿ ಮತ್ತು ಬಿ) ಇವರು ಡಿಸ್ಟಿಲರಿ ಮತ್ತು ಬ್ರಿವರಿಗಳಿಗೆ ಸಂಬಂಧಿಸಿದ ವಿಷಯಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರಿಯಾಗಿರುತ್ತಾರೆ. ಮತ್ತೊಬ್ಬ ಜಂಟಿ ಆಯುಕ್ತರು ಆಂತರಿಕ ಲೆಕ್ಕ ಪರಿಶೋಧನೆ ವಿಷಯಗಳ ಮತ್ತು ಭಾರತೀಯ ತಯಾರಿಕಾ ಮದ್ಯ ಸನ್ನದುಗಳ ಮಂಜೂರಾತಿ ಹಾಗೂ ನವೀಕರಣದ ವಿಷಯಗಳ ನಿರ್ವಹಿಸುವ ಅಧಿಕಾರಿಯಾಗಿರುತ್ತಾರೆ.

**(ಇ) ಅಬಕಾರಿ ಉಪ ಆಯುಕ್ತರು:**

1. ಕಾನೂನು ವಿಭಾಗ: ಕಾನೂನು ವಿಭಾಗದ ಉಪ ಆಯುಕ್ತರು ಇಲಾಖೆಗೆ ಸಂಬಂಧಿಸಿದ ವ್ಯಾಜ್ಯಗಳ ನಿರ್ವಹಣೆಯನ್ನು ವಹಿಸುತ್ತಾರೆ.
2. ನಾರ್ಕೋಟಿಕ್ಸ್: ಇವರು ಮಾದಕ ಮತ್ತು ಉದ್ದೀಪನ ವಸ್ತುಗಳ ಅಕ್ರಮ ಚಟುವಟಿಕೆಯನ್ನು ನಿಯಂತ್ರಿಸುವ ಅಧಿಕಾರಿಯಾಗಿರುತ್ತಾರೆ.

**(ಎಫ್) ಕೇಂದ್ರಸ್ಥಾನ ಸಹಾಯಕರು:**

ಅಬಕಾರಿ ಆಯುಕ್ತರ ಕೇಂದ್ರ ಸಹಾಯಕರಾಗಿ ಅಬಕಾರಿ ಅಧೀಕ್ಷಕರ ಹುದ್ದೆಯ ಇಬ್ಬರು ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಗಳು ಇಲಾಖೆಯ ದೈನಂದಿನ ಕಾರ್ಯನಿರ್ವಹಣೆಯಲ್ಲಿ ಅಬಕಾರಿ ಆಯುಕ್ತರಿಗೆ ನೆರವಾಗುತ್ತಾರೆ. ಅಬಕಾರಿ ಆಯುಕ್ತರ 1ನೇ ಕೇಂದ್ರ ಸಹಾಯಕರು ಅಬಕಾರಿ ಇಲಾಖೆಗೆ ಸಂಬಂಧಪಟ್ಟಂತೆ ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ಸೆಕ್ಷನ್ 2(ಸಿ) ಅನ್ವಯ ರಾಜ್ಯಮಟ್ಟದಲ್ಲಿ ಸಾರ್ವಜನಿಕ ಪ್ರಾಧಿಕಾರಿಯಾಗಿರುತ್ತಾರೆ.

**(ಜಿ) ಲೆಕ್ಕಾಧಿಕಾರಿಗಳು:**

ಅಬಕಾರಿ ಆಯುಕ್ತರ ಕಛೇರಿಯಲ್ಲಿ ಮಹಾಲೇಖಪಾಲರ ಕಛೇರಿಯಿಂದ ನಿಯೋಜಿತರಾಗಿರುವ ಇಬ್ಬರು ಅಧಿಕಾರಿಗಳ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇವರುಗಳಲ್ಲಿ ಒಬ್ಬರು ಲೆಕ್ಕಾಧಿಕಾರಿಯಾಗಿದ್ದು ಯೋಜನಾ ಮತ್ತು ಆಯವ್ಯಯದ ವಿಷಯಗಳಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸುತ್ತಿದ್ದಾರೆ, ಮತ್ತೊಬ್ಬರು ಲೆಕ್ಕಪರಿಶೋಧನಾ ಅಧಿಕಾರಿಯಾಗಿದ್ದು ಅವರು ರಾಜ್ಯದಲ್ಲಿರುವ ಎಲ್ಲಾ ಅಬಕಾರಿ ಅಧೀನ ಕಛೇರಿಗಳ ಲೆಕ್ಕಪತ್ರಗಳ ಪರಿಶೋಧನಾ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ.

**(ಹೆಚ್) ಜಂಟಿ ನಿರ್ದೇಶಕರು (ಸಾಂಖ್ಯಿಕ):**

ಈ ಅಧಿಕಾರಿಯವರು ಅಬಕಾರಿ ರಾಜಸ್ವದ ಸಂಗ್ರಹಣೆ ಮುಂತಾದ ಅಂಕಿ ಅಂಶಗಳ ನಿರ್ವಹಣೆ ಮಾಡುವ ಹಾಗೂ ಇಲಾಖೆಯ ವಾರ್ತೆಗಳ ಸಂಗ್ರಹಣೆ ಮಾಡುವ ಅಧಿಕಾರಿಯಾಗಿರುತ್ತಾರೆ.

**(ಐ) ಅಬಕಾರಿ ಉಪ ಅಧೀಕ್ಷಕರು:**

ಅಬಕಾರಿ ಆಯುಕ್ತರ ಕಛೇರಿಯಲ್ಲಿ 5 ಮಂದಿ ಅಬಕಾರಿ ಉಪ ಅಧೀಕ್ಷಕರುಗಳು ಕಾರ್ಯನಿರ್ವಹಿಸುತ್ತಿದ್ದು, ಅವರುಗಳು ಕಛೇರಿಯ ವಿಭಾಗಗಳ ದೈನಂದಿನ ಕಾರ್ಯನಿರ್ವಹಣೆಯಲ್ಲಿ ತಮ್ಮ ಮೇಲಧಿಕಾರಿಗಳಿಗೆ ನೆರವು ನೀಡುವ ಅಧಿಕಾರಿಗಳಾಗಿರುತ್ತಾರೆ.

**(ಜೆ) ವ್ಯವಸ್ಥಾಪಕರು:**

ಅಬಕಾರಿ ಆಯುಕ್ತರ ಕಛೇರಿಯಲ್ಲಿ 4 ಮಂದಿ ವ್ಯವಸ್ಥಾಪಕರುಗಳು ಕಾರ್ಯನಿರ್ವಹಿಸುತ್ತಿದ್ದು, ಇವರುಗಳು ವಿಷಯ ನಿರ್ವಾಹಕರುಗಳ ಕಾರ್ಯನಿರ್ವಹಣೆಯ ಉಸ್ತುವಾರಿಯನ್ನು ನೋಡಿಕೊಳ್ಳುವರು.

**(ಕೆ) ಪ್ರಥಮ/ ದ್ವಿತೀಯ ದರ್ಜೆ ಸಹಾಯಕರು:**

ಅಬಕಾರಿ ಆಯುಕ್ತರ ಕಛೇರಿಯಲ್ಲಿ 20 ಮಂದಿ ಪ್ರಥಮ ದರ್ಜೆ ಸಹಾಯಕರು ಮತ್ತು 22 ಮಂದಿ ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದಾರೆ. ಅವರುಗಳು ತಮಗೆ ವಹಿಸಿದ ವಿಷಯಗಳಿಗೆ ಸಂಬಂಧಿಸಿದ ಕಡತಗಳ ನಿರ್ವಹಣೆ ಹಾಗೂ ಅವುಗಳ ಶೀಘ್ರ ವಿಲೇವಾರಿಗೆ ಗಮನ ಹರಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

**2. ಕ್ಷೇತ್ರ ಕಛೇರಿಗಳು:**

ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಇವರು ವಿಭಾಗ ಮಟ್ಟದ ಮುಖ್ಯಸ್ಥರಾಗಿರುತ್ತಾರೆ. ಅವರು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಅಬಕಾರಿ ಕಾಯ್ದೆ ಮತ್ತು ನಿಯಮಗಳನ್ನು ಜಾರಿಗೊಳಿಸುವುದು, ಅಕ್ರಮ ಚಟುವಟಿಕೆಗಳನ್ನು ಮತ್ತು ಅಪರಾಧಗಳನ್ನು ಹತ್ತಿಕ್ಕುವ ಕಾರ್ಯ ನಿರ್ವಹಣೆಯ ನೇರ ಮತ್ತು ಮೇಲ್ವಿಚಾರಣೆ ಅಧಿಕಾರ ಹೊಂದಿರುತ್ತಾರೆ. ಇವರ ಅಧೀನದಲ್ಲಿ ಅಬಕಾರಿ ವಿಚಕ್ಷಕ ದಳ ಮತ್ತು ಉಪವಿಭಾಗ ಕಛೇರಿಗಳು ಕಾರ್ಯ ನಿರ್ವಹಿಸುತ್ತಿದ್ದು ಅಲ್ಲಿಗೆ ಅಬಕಾರಿ ಉಪ ಅಧೀಕ್ಷಕರು ಮುಖ್ಯಸ್ಥರಾಗಿರುತ್ತಾರೆ. ಅವರುಗಳೂ ಸಹ ಅಬಕಾರಿ ಕಾಯ್ದೆ ಮತ್ತು ನಿಯಮಗಳನ್ನು ಜಾರಿಗೊಳಿಸುವ, ಹಾಗೂ ಮೊಕದ್ದಮೆಗಳನ್ನು ದಾಖಲು ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ. ಅಬಕಾರಿ ಉಪ ಆಯುಕ್ತರು ಜಿಲ್ಲಾ ಮಟ್ಟದ ಮುಖ್ಯಸ್ಥರಾಗಿದ್ದು ಆಡಳಿತಾತ್ಮಕ ವಿಷಯದಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಮತ್ತು ವಿಭಾಗೀಯ ಜಂಟಿ ಆಯುಕ್ತರುಗಳಿಗೆ ಇಲಾಖೆಯ ವಿಷಯಗಳಲ್ಲಿ ವರದಿ ಮಾಡಿಕೊಳ್ಳುವರು. ಅಬಕಾರಿ ಉಪ ಆಯುಕ್ತರುಗಳ ಅಧೀನದಲ್ಲಿ ವಲಯ ಮಟ್ಟದಲ್ಲಿ ಅಬಕಾರಿ ನಿರೀಕ್ಷಕರು ಹಾಗೂ ಉಪ ವಲಯ ಮಟ್ಟದಲ್ಲಿ ಅಬಕಾರಿ ಉಪ ನಿರೀಕ್ಷಕರು ಕಾರ್ಯನಿರ್ವಹಿಸುತ್ತಿದ್ದಾರೆ.

**3. ಕಾರ್ಯವಿಧಾನ:**

ಅಬಕಾರಿ ಇಲಾಖೆಯ ಎಲ್ಲಾ ಅಧಿಕಾರಿಗಳು ಮತ್ತು ನೌಕರರು ಸರ್ಕಾರವು ನಿಗದಿಪಡಿಸಿರುವ ಕಛೇರಿ ಕಾರ್ಯವಿಧಾನದ ಅನ್ವಯ ಕರ್ತವ್ಯ ನಿರ್ವಹಿಸುತ್ತಾರೆ. ಸಕ್ಷಮ ಅಧಿಕಾರಿಗಳು ಕಾನೂನು ರೀತ್ಯ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳುವರು.

ಕಛೇರಿ ವ್ಯವಹಾರ ನಡೆಸುವಲ್ಲಿ ಹಾಗೂ ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಶೀಘ್ರ ವಿಲೇವಾರಿ ಪರಿಪಾಠವನ್ನು ಇಟ್ಟುಕೊಳ್ಳಲಾಗಿದೆ. ಇಲಾಖೆಗೆ ಸಂಬಂಧಿಸಿದ ಎಲ್ಲಾ ವ್ಯವಹಾರಗಳನ್ನು ಕಾನೂನು ರೀತ್ಯಾ ಕಟ್ಟುನಿಟ್ಟಾಗಿ ನಿರ್ವಹಿಸುವ ಹೊಣೆಗಾರಿಕೆ ಇರುತ್ತದೆ.

ಇಲಾಖೆಯು ಕೈಗೊಳ್ಳುವ ಶಾಸನಬದ್ಧ ಚಟುವಟಿಕೆಗಳ ಬಗ್ಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗುತ್ತಿದೆ, ಹಾಗೂ ಕಛೇರಿಗಳ ಸೂಚನಾ ಫಲಕಗಳಲ್ಲಿ ಪ್ರಚುರಪಡಿಸಲಾಗುತ್ತಿದೆ. ಜೊತೆಗೆ 'ಇ' ಮೇಲ್ ಸೌಲಭ್ಯವನ್ನು ಬಳಸಿಕೊಂಡು ಸಾರ್ವಜನಿಕರೊಡನೆ ವ್ಯವಹರಿಸಲು ಅವಕಾಶವಿರುತ್ತದೆ. (E-mail:excise@eth.net). ಇಲಾಖೆಯ ಕಾರ್ಯಚಟುವಟಿಕೆಗಳನ್ನು ಶೀಘ್ರದಲ್ಲೇ ವೆಬ್‌ಸೈಟ್‌ನಲ್ಲಿ ಪ್ರಚುರಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಇಲಾಖೆಯ ಮಾಹಿತಿಯನ್ನು ಇತರೆ ಇಲಾಖೆಗಳೊಂದಿಗೆ ಹಂಚಿಕೊಳ್ಳುವ ಸಲುವಾಗಿ ವೈಡ್ ಏರಿಯಾ ನೆಟ್‌ವರ್ಕ್ ಸೌಲಭ್ಯವನ್ನು ಅಳವಡಿಸಲಾಗುತ್ತಿದೆ.

ಪಿ.ಆರ್. 1001 ಅಬಕಾರಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-11/2003**

**ಅರ್ಜಿದಾರರು:**

1. ರೂಪ ಕೋಂ ಲೇಟ್ ನಾಗೇಂದ್ರ @ ರವಿ @ ತಂಬಿ, 22 ವರ್ಷ
2. ಪ್ರೇಮ ಕೋಂ, ಗಂಗಾಧರ, ಸುಮಾರು 46 ವರ್ಷ.
3. ಜಿ. ಗಂಗಾಧರ ಬಿನ್ ಗೋಪಾಲರಾಜ್, 65 ವರ್ಷ
4. ರಾಹುಲ್ ಬಿನ್ ಲೇಟ್ ನಾಗೇಂದ್ರ @ ತಂಬಿ, 1 ತಿಂಗಳು. ವಾಸ: ದೊಡ್ಡಮಂಡಿಗನ ಹಳ್ಳಿ, ವಿಜಯನಗರ ಬಡಾವಣೆ 1ನೇ ಹಂತ, ಕಂವಲಿ ಅಂಚೆ, ಹಾಸನ ತಾಲ್ಲೂಕು.

**ಪ್ರತಿವಾದಿಗಳು:**

1. ಶ್ರೀ ಕೆ.ಎಸ್. ರವಿ ಬಿನ್ ಸುಬ್ಬೇಗೌಡ, ಶಾಂತಿನಿವಾಸ, ನಂ. 227, ಬಿ. ಕಾಟೀಹಳ್ಳಿ ಕೊಪ್ಪಲು, ಗವೇನಹಳ್ಳಿ ಅಂಚೆ. ಹಾಸನ ತಾಲ್ಲೂಕು.
2. ದಿ ಡಿವಿಜನ್ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಈಸ್ಟ್‌ಕೋಸ್ಟ್ ಪೋಸ್ಟ್, ಮೊದಲನೆ ಮಹಡಿ 92, ಟಿ. ನಗರ, ಚೆನ್ನೈ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರವಿ @ ತಂಬಿ @ ನಾಗೇಂದ್ರರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 14.11.2002ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1006

**E.G. CYBENETICS PVT LTD.,**

**79/5, 2nd Cross, Ramaiah Reddy Layout, Nandidurg Road, Bangalore 560 046**

**(Pursuant to Section 485 of the Companies Act 1956)**

Notice: is hereby given that by a resolution dated: 3rd September 2003 passed by the shareholders, it was resolved that the company be wound up voluntarily under Members voluntary winding up and Shri Gurvinder Singh Ahluwalia, Managing Director has been appointed as LIQUIDATOR of the company. Any person objecting to the above may write to the company within 30 days from the date of this advertisement.

GURVINDER SINGH AHLUWALIA
Managing Director & Liquidator.

PD. 87

**ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಬೆಂಗಳೂರು**

**ನಂ: ಕೈಜಇ:ಜಂ.ರಿ-ಟಿ1: ನೋಂದಣಿ ರದ್ದತಿ: 80: 98-99 ದಿನಾಂಕ: 21ನೇ ಆಗಸ್ಟ್ 2003**

**ವಿಷಯ :** ಸಮಾಪನೆಗೊಂಡಿರುವ ಕಡೂರು ತಾಲ್ಲೂಕು ಕುರಿ ಪೋಷಕರ ಉಣ್ಣೆ ನೇಕಾರರ ಸಹಕಾರ ಸಂಘ ನಿ, ಕಡೂರು, ಚಿಕ್ಕಮಗಳೂರು ಜಿಲ್ಲೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :**
1. ಈ ಕಚೇರಿಯ ಆದೇಶ ಸಂ. ಕೈಜಇ: ಜಂ. ರಿ-ಟಿ1: ಸಮಾಪನೆ: 80: 1998-99 ದಿನಾಂಕ: 18.7.2000.
2. ಸಹಕಾರ ಸಂಘಗಳ ಉಪ ನಿಬಂಧಕರು, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂ. ಡಿಆರ್‌ಸಿ: ಸಮಾಪನೆ: 1925: 2002-03 ದಿನಾಂಕ: 30.3.2003.

**ಪ್ರಸ್ತಾವನೆ:**

ಕಡೂರು ತಾಲ್ಲೂಕು ಕುರಿ ಪೋಷಕರ ಉಣ್ಣೆ ನೇಕಾರರ ಸಹಕಾರ ಸಂಘ ನಿ. ಕಡೂರು, ಚಿಕ್ಕಮಗಳೂರು ಜಿಲ್ಲೆ ಇದನ್ನು ಉಲ್ಲೇಖ (1)ರ ಈ ಕಚೇರಿ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಸಂಘಗಳ ಪರಿವೀಕ್ಷಕರು (ಅಂಕಿ ಅಂಶ ಶಾಖೆ) ಸಹಕಾರ ಸಂಘಗಳ ಉಪ ನಿಬಂಧಕರ ಕಚೇರಿ, ಚಿಕ್ಕಮಗಳೂರು ಇವರನ್ನು ಸಮಾಪಕರನ್ನಾಗಿ ಪ್ರಕ್ರಿಯೆಗಳನ್ನು ಪೂರೈಸಿ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಸಂಬಂಧಪಟ್ಟ ಇಲಾಖಾಧಿಕಾರಿಗಳಿಗೆ ಪ್ರಸ್ತಾವವನ್ನು ಸಲ್ಲಿಸಿರುತ್ತಾರೆ. ಇವರ ಪ್ರಸ್ತಾವವನ್ನು ಪರಿಶೀಲಿಸಿ ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶವನ್ನು ಹೊರಡಿಸುವಂತೆ ಸಹಕಾರ ಸಂಘಗಳ ಉಪ ನಿಬಂಧಕರು, ಚಿಕ್ಕಮಗಳೂರು ಜಿಲ್ಲೆ ಇವರು ಉಲ್ಲೇಖ(2)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿರುವ ಬಗ್ಗೆ ಸಹಕಾರ ಸಂಘಗಳ ಹಿರಿಯ ಲೆಖ್ಖ ಪರಿಶೋಧಕರಿಂದ ದೃಢೀಕರಣ ಪಡೆಯಲಾಗಿದೆ.

ಮೇಲ್ಕಂಡ ಹಿನ್ನಲೆಯಲ್ಲಿ ಈ ಕಚೇರಿಗೆ ಸಲ್ಲಿಸಲಾಗಿರುವ ಪ್ರಸ್ತಾವವನ್ನು ವಿವರವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ಮೇರೆಗೆ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69. ಸಿಎಲ್‌ಎಮ್ 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ರಾಮಿರೆಡ್ಡಿ, ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಬೆಂಗಳೂರು-1 ಆದ ನಾನು ಕಡೂರು ತಾಲ್ಲೂಕು ಕುರಿ ಪೋಷಕರ ಉಣ್ಣೆ ನೇಕಾರರ ಸಹಕಾರ ಸಂಘ ನಿ, ಕಡೂರು, ಚಿಕ್ಕಮಗಳೂರು ಜಿಲ್ಲೆ ಇದರ ನೋಂದಣಿ ಸಂಖ್ಯೆ: ಡಿಆರ್‌ಸಿ:ಆರ್‌ಜಿಎನ್: 2261:75-76 ದಿನಾಂಕ: 29.5.1975 ಅನ್ನು ರದ್ದುಪಡಿಸಿರುತ್ತೇನೆ. ಪರಿಣಾಮವಾಗಿ ಸಹಕಾರ ಸಂಘಗಳ ಕಾಯ್ದೆ ಕಲಂ 9 ರಡಿ ಅರ್ಜಿಸಿಕೊಂಡಿದ್ದ ಎಲ್ಲಾ ಹಕ್ಕುಗಳು ನಿಂತು ಹೋಗಿ ಸದರಿ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಕಚೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: 21.8.2003 ರಂದು ಹೊರಡಿಸಿರುತ್ತೇನೆ.

**ಬಿ. ರಾಮಿರೆಡ್ಡಿ**

ಪಿ.ಆರ್.1004 ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ).

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ.**

**ಸಂ: ಕಾಪಕಾ: ಎಫ್:ಎಸ್‌ಆರ್-10/2003**

**ಅರ್ಜಿದಾರರು :**
1. ಶ್ರೀ ಶಿವೇಗೌಡ ಅಲಿಯಾಸ್ ಶಿವಣ್ಣಗೌಡ ಬಿನ್ ದೇವೇಗೌಡ, ಸುಮಾರು 58 ವರ್ಷ,
2. ಶ್ರೀಮತಿ ಗಿಡ್ಡಮ್ಮ ಕೋಂ. ಶ್ರೀ ಶಿವೇಗೌಡ ಅಲಿಯಾಸ್ ಶಿವಣ್ಣಗೌಡ ಸುಮಾರು 52 ವರ್ಷ, ವಾಸ: ಕದಾಳು ಗ್ರಾಮ, ಕುಂದೂರು ಹೋಬಳಿ, ಆಲೂರು ತಾಲ್ಲೂಕು ಹಾಸನ ಜಿಲ್ಲೆ,

**ಪ್ರತಿವಾದಿಗಳು :**
1. ಮಾಲೀಕರು, ಮೇ: ಅನುಗ್ರಹ ಏಜೆನ್ಸೀಸ್, ಭಾರತ್ ಗ್ಯಾಸ್ ಹಂಚಿಕೆದಾರರು, ನಂ.30/2, ಎಸ್.ವಿ. ಕಾಂಪ್ಲೆಕ್ಸ್, 12ನೇ ಕ್ರಾಸ್ ಎಂ. ಸಿ. ಕಾಂಪ್ಲೆಕ್ಸ್, 12ನೇ ಕ್ರಾಸ್, ಎಂ. ಸಿ. ಲೇಔಟ್ ಮಾಗಡಿ ಮೈನ್ ರಸ್ತೆ ವಿಜಯನಗರ, ಬೆಂಗಳೂರು.
2. ದಿ ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ., ನಂ. 20, ಜಾಲಹಳ್ಳಿ ಕ್ರಾಸ್ ಚೊಕ್ಕಸಂದ್ರ, ಬೆಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕೆ. ಎಸ್. ಸುರೇಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 12.1.2003 ರಂದು ಸಾವನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್.1005 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ,
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## ಕೃಷಿ ಮತ್ತು ತೋಟಗಾರಿಕೆ ಇಲಾಖೆ

### ಸಾರ್ವಜನಿಕ ಪ್ರಕಟಣೆ

**ಸಂಖ್ಯೆ: ಕೃತೋಇ 445: ತೋಇವಿ: 2003 ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000-ಪರಿಚ್ಛೇದ 3(ಬಿ) ಅಡಿ ಮಾಹಿತಿ ಪ್ರಕಟಣೆ**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ರೊಂದಿಗೆ ಓದಿಕೊಂಡು ಪರಿಚ್ಛೇದ 3 (ಬಿ) ಪ್ರಕಾರ ಕೃಷಿ ಮತ್ತು ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಮಾಹಿತಿ ಪ್ರಕಟಣೆ ಬಗ್ಗೆ.

| | | | |
|---|---|---|---|
| 1. | ಕಾರ್ಯದರ್ಶಿ | : | ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು. |
| 2. | ಅಪರ ಕಾರ್ಯದರ್ಶಿ | : | ತೋಟಗಾರಿಕೆ ಇಲಾಖೆಯ ಸೇವಾ ವಿಷಯಕ್ಕೆ ಸಂಬಂಧಪಟ್ಟಂತೆ |
| 3. | ಅಧೀನ ಕಾರ್ಯದರ್ಶಿ (ಪೀಠಾಧಿಕಾರಿ-1) | : | ತೋಟಗಾರಿಕೆ ಇಲಾಖೆಯ ಪತ್ರಾಂಕಿತ ಹಾಗೂ ಪತ್ರಾಂಕಿತವಲ್ಲದ ಎಲ್ಲಾ ಅಧಿಕಾರಿ: ನೌಕರರ ಸೇವಾ ವಿಷಯಗಳು, ನ್ಯಾಯಾಲಯ ನಿಂದನಾ ಪ್ರಕರಣಗಳು, ಇಲಾಖಾ ವಿಚಾರಣಾ ಪ್ರಕರಣಗಳು ಹಾಗೂ ಇಲಾಖೆಯ ತಾಂತ್ರಿಕ ವಿಷಯಗಳು, ಇಲಾಖೆಗೆ ಸೇರಿದ ಕ್ಷೇತ್ರ ಹಾಗೂ ನರ್ಸರಿಗೆ ಸಂಬಂಧಿಸಿದ ವಿಷಯಗಳು. |
| 4. | ಶಾಖಾಧಿಕಾರಿ (ಪೀಠಾಧಿಕಾರಿ-2) | : | ತೋಟಗಾರಿಕೆ ಇಲಾಖೆಯ ಅಧಿಕಾರಿ:ನೌಕರರ ಇಲಾಖಾ ವಿಚಾರಣೆ, ಮೇಲ್ಮನವಿ, ಜೇಷ್ಠತಾ ಪಟ್ಟಿ, ಆಸ್ತಿ ಮತ್ತು ಋಣಪಟ್ಟಿ ಹಾಗೂ ಗ್ರೂಪ್-ಸಿ ವರ್ಗದ ನೌಕರರ ಸೇವಾ ವಿಷಯಗಳು, ಇಲಾಖೆಗೆ ಸೇರಿದ ಜಮೀನುಗಳ ಬಗ್ಗೆ ಹಾಗೂ ತೋಟಗಾರಿಕೆ ಕ್ಷೇತ್ರಗಳ ಬಗ್ಗೆ ಹಾಗೂ ಇದಕ್ಕೆ ಸಂಬಂಧಪಟ್ಟ ನ್ಯಾಯಾಲಯದ ವಿಷಯಗಳು. |

ಸರ್ಕಾರದ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ (ತೋಟಗಾರಿಕೆ) ಇವರನ್ನು ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ನಿಯಮ 2000ರ ಉಪ ನಿಯಮ-1, ನಿಯಮ 5 ರೊಂದಿಗೆ ಓದಲಾದ ಪ್ರಕರಣ 7ರ ಮೇರೆಗೆ ಮೇಲ್ಮನವಿ ಪ್ರಾಧಿಕಾರವನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1007

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬೆಂಗಳೂರು (ನಗರ) ಜಿಲ್ಲೆ, ಬೆಂಗಳೂರು

**ಪ್ರಕಟಣೆ ಸಂ: ಜಿಸಕಅ(ನ) ಯೋ: ಸಿಆರ್: 03-04 ದಿನಾಂಕ: 25ನೇ ಆಗಸ್ಟ್ 2003**

**ವಿಷಯ :** ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ಪರಿಶಿಷ್ಟಜಾತಿ: ಪ. ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

2003-04ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ತರಬೇತಿ ನೀಡಲು ಪರಿಶಿಷ್ಟಜಾತಿ: ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಅದರಂತೆ ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಬಲ್ಲ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು, ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವವರು ಮಾತ್ರ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.

**ಷರತ್ತುಗಳು:**

1. ಅಭ್ಯರ್ಥಿಗಳು 35 ವರ್ಷ ವಯೋಮಿತಿಯಲ್ಲಿರಬೇಕು.
2. ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಎರಡು ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು.
3. ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ. 1000-00 ಶಿಷ್ಯ ವೇತನ ನೀಡಲಾಗುವುದು.
4. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚು ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿ ನಿಯೋಜಿಸಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟು ಹೋಗಬಾರದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ಯಮದಲ್ಲಿ ನೇಮಕ ಹೊಂದಿದವರಿಗೆ ಅನ್ವಯಿಸುವುದಿಲ್ಲ.
6. ಸುಳ್ಳು ದಾಖಲೆ ಮಾಹಿತಿಯನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನನ್ವಯ ಶಿಕ್ಷೆಗೆ ಗುರಿಪಡಿಸಲಾಗುವುದು. ಅನಂತರ ಅಭ್ಯರ್ಥಿಗಳಿಂದ ತರಬೇತಿಯ ಅವಧಿಯಲ್ಲಿ ನೀಡಿದ ಶಿಷ್ಯ ವೇತನವನ್ನು ಶೇ. 10 ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.

7. ಬೆಂಗಳೂರು ನಗರ ಜಿಲ್ಲೆಯರಿಗೆ ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲಾಗುವುದು.
8. ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದ ಪಕ್ಷದಲ್ಲಿ ಅರ್ಜಿ ಅಪೂರ್ಣವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
10. ಅರ್ಜಿ ಪಡೆಯಲು ಮತ್ತು ಸಲ್ಲಿಸಬೇಕಾದ ಪೂರ್ಣ ವಿಳಾಸ ಈ ಕೆಳಕಂಡಂತೆ ಇರುತ್ತದೆ.

**ವಿಳಾಸ:**

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ,
ಬೆಂಗಳೂರು (ನ) ಜಿಲ್ಲೆ, ಬೆಂಗಳೂರು.
4ನೇ ಮುಖ್ಯ ರಸ್ತೆ, 16ನೇ ಅಡ್ಡರಸ್ತೆ
ಸಂಪಂಗಿರಾಮನಗರ, ಬೆಂಗಳೂರು-27
ಪಿ.ಆರ್.1009

ಸಹಿ
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,
ಬೆಂಗಳೂರು(ನ) ಜಿಲ್ಲೆ ಬೆಂಗಳೂರು.

**COMMERCIAL TAXES DEPARTMENT**

**OFFICE OF THE ASST. COMMR. OF COMML, TAXES, 13TH CIRCLE, BANGALORE**

**NOTIFICATION**

**No: T: 210/03-04 DATED: 22nd AUGUST 2003**

It is hereby notified to the notice of General Public that the Statutory forms/declaration forms issued to the following dealer as detailed noted against the dealer who is treated as invalid due to closure of the business w.e.f. 1-04-1990 and the said dealer has not surrendered the Statutory forms/declaration forms which has been obtained from this office. Any persons attempt to use the following statutory/declaration forms are themselves responsible for further consequences.

| Sl. No. | Name and address of the assessee with R.C. No. | Date of Issue | Sl.No. of declaration forms | Total No. of forms invalid |
|---|---|---|---|---|
| 1. | M/s. Brindavan Packaging Products (P) Ltd., No. 45/25 Gubbanna Industrial estate, Rajajinagar, Bangalore. | 18.6.1985 | Form-37 No. 11116 to 11125 | 10 |

**M. C. MAHADEVA**
Asst. Commr. of Comml. Taxes, 13th Circle, Bangalore.

PR-1010

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು ಮೊಗರು ಗ್ರಾಮದಲ್ಲಿ ಹೊಂದಿರುವ ಮಲ್ಟಿ ಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 172ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲಿಸ್ ಎಂದು ಪರಿಗಣಿಸಿ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಅಂತಿಮ ನೋಟೀಸು ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗು 172:2003-04: 5959 ದಿನಾಂಕ: 3.3.2003
2. ಉಪ ನಿರ್ದೇಶಕರು, ಮಂಗಳೂರು ರವರ ಪತ್ರ ಸಂ. ದಕಜಿ: ಗಭೂಇ:ಡಿಸಿಬಿ: 2003-04: 2109: ದಿನಾಂಕ: 17.6.2003.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ತಾಲ್ಲೂಕು ಮೊಗರು ಗ್ರಾಮದಲ್ಲಿ ಸರ್ವೆ ನಂ. 120:1ರಲ್ಲಿ ಶ್ರೀ. ಪಿ. ಉಸ್ಮಾನ್ ರವರಿಗೆ 0-50 ಸೆಂಟ್ಸ್ ಗೆ ದಿನಾಂಕ: 31.3.1998 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನ ಪತ್ರಗಳನ್ನು ನೀಡಿ 2002ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 20987-00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ.ಆರ್.ಸಿ. 92 ದಿನಾಂಕ: 2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ: ಡಿಸಿಬಿ:ಕಗು 172: 2003-04 :10388 ದಿನಾಂಕ: 28ನೇ ಆಗಸ್ಟ್ 2003**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಶ್ರೀ ಪಿ. ಉಸ್ಮಾನ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು ಮೊಗರು ಗ್ರಾಮದ ಸರ್ವೆ ನಂ. 120:1 ರಲ್ಲಿ 0-50 ಸೆಂಟ್ಸ್‌ಗೆ ಮಲ್ಟಿ ಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 172ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲಿಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ. ಆರ್. 1011

ನಿರ್ದೇಶಕರು,
ಗಣಿ ಮತ್ತು ಭೂ ವಿಜ್ಞಾನ ಇಲಾಖೆ.

**OFFICE OF THE DIRECTOR, DEPARTMENT OF MINES AND GEOLOGY, KHANIJA BHAVAN, DEVARAJ URS ROAD, BANGALORE-1**

**CORRIGENDUM**

**No. DMG/DCBML/ 2217/03-04/ 10363 DATED: 28th AUGUST 2003**

**Sub :** Determination of Mining lease No. 2217. of Sri. Syed Abdul Jaleel under Rule 27(5) of MCR. 1960.

Following is the Corrigendum to the order issued earlier under Rule 27(5) of MCR, 1960 vide proceedings No. DMG/DCB-2/ML-2217/2002-03/6853-60 dated: 11th July 2003.

In the first para of Preamble, the word 'Manganese' may be read as 'Moulding sand'.

PR-1012 Director of Mines & Geology.

**ಬೆಂಗಳೂರು ನಗರ ಜಿಲ್ಲಾ ಪಂಚಾಯತ್ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು**

**ಉಪ ನಿರ್ದೇಶಕರ ಕಛೇರಿ, ಬೆಂಗಳೂರು ನಗರ ಜಿಲ್ಲೆ ಹೆಬ್ಬಾಳ ಬೆಂಗಳೂರು - 24**

**ಕಛೇರಿ ಅಧಿಸೂಚನೆ**

**ಸಂ: ಉನಿ:ಬೆಂನಜಿ:ಸಾಅ:ಸಿ4: 03-04/ 4377- 85 ದಿನಾಂಕ: 19ನೇ ಆಗಸ್ಟ್ 2003**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮ 2000 ಮತ್ತು ಹಕ್ಕು ನಿಯಮಗಳು-2002ರ ಅಡಿಯಲ್ಲಿ ಮಾಹಿತಿ ನೀಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಪತ್ರ ಸಂ:ಪಸಂಮಿ: 280:ಪಪಾಯೋ:102: ದಿನಾಂಕ: 16.10.2002.
2. ನಿರ್ದೇಶಕರು ಪಶುಪಾಲನಾ ಇಲಾಖೆ, ಬೆಂಗಳೂರು ರವರ ಪತ್ರ ಸಂ: ನಿಪಸಂ:ವಿವ:ಸಿ1:6:02-03 ದಿನಾಂಕ: 29.10.2002.
3. ನಿರ್ದೇಶನಾಲಯದ ಅರೆ ಸರ್ಕಾರಿ ಪತ್ರ ಸಂ:ನಿಪಸಂ: ಸಿ:1ಅ: 03-04: ದಿನಾಂಕ: 16.8.2003.

ಮೇಲ್ಕಂಡ ಉಲ್ಲೇಖ(1)ರ ಸರ್ಕಾರಿ ಆದೇಶಾನುಸಾರ ಹಾಗೂ ಉಲ್ಲೇಖ (2)ರ ನಿರ್ದೇಶನಾಲಯದ ಸೂಚನಾನುಸಾರ ಈ ಜಿಲ್ಲೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ಜಿಲ್ಲಾವಾರು: ತಾಲ್ಲೂಕುವಾರು ರಚನೆ ನಿರ್ದೇಶಕರು, ಪಶುಪಾಲನಾ ಇಲಾಖೆ ಬೆಂಗಳೂರು ರವರಿಗೆ ವರದಿಯನ್ನು ಈ ಕಛೇರಿ ಪತ್ರ ಸಂ: ಉನಿ: ಬೆಂನಜಿ: ಸಾಅ:ಸಿ4: 03-04: 4226-28: ದಿನಾಂಕ: 12.8.2003ರಲ್ಲಿ ಸಲ್ಲಿಸಲಾಗಿದೆ. ಮತ್ತು ತಾಲ್ಲೂಕುವಾರು ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರವನ್ನು ಸಹ ರಚಿಸಲಾಗಿದೆ.

ಮುಂದುವರೆಯುತ್ತಾ ಉಲ್ಲೇಖ (3)ರ ನಿರ್ದೇಶನಾಲಯದ ಪತ್ರದ ಆದೇಶಾನುಸಾರ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ-2000 ಮತ್ತು ಹಕ್ಕು ನಿಯಮಗಳು-02ರ ಅಡಿಯಲ್ಲಿನ ಪ್ರಕರಣ (3ಬಿ) ಅಡಿಯಲ್ಲಿ ಈ ಕೆಳಕಂಡಂತೆ ಪ್ರಕಟಣೆಯನ್ನು ಹೊರಡಿಸಿ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

**ಸೂಚನಾ ಫಲಕದಲ್ಲಿನ ಮಾಹಿತಿ ಈ ಕೆಳಕಂಡಂತೆ ಇರುತ್ತದೆ:**

**1) ಪಶು ಆಸ್ಪತ್ರೆ ಪಶುಚಿಕಿತ್ಸಾಲಯ**

ಅ) ಬೆಂಗಳೂರು ನಗರದಲ್ಲಿನ ಪಶು ಆಸ್ಪತ್ರೆ ರಾಜಾಜಿನಗರ: ದಂಡು ಪ್ರದೇಶ: ಮತ್ತು ನಗರ ಪಶು ಆಸ್ಪತ್ರೆ ಚಾಮರಾಜಪೇಟೆಯಲ್ಲಿ ಜಾನುವಾರುಗಳಿಗೆ ಅದರಲ್ಲಿಯೂ ಸಣ್ಣ ಪ್ರಾಣಿಗಳಿಗೆ ಕ್ಷಕಿರಣ ಸೌಲಭ್ಯವನ್ನು ಕಲ್ಪಿಸಲಾಗಿದೆ.

ಆ) ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಲ್ಲಿಯೂ ಶುಲ್ಕ ಪಾವತಿಯ ಮೇಲೆ (ಪ್ರತಿ ವೀರ್ಯನಳಿಕೆಗೆ ರೂ.5:00 ರಂತೆ) ಕೃತಕ ಗರ್ಭಧಾರಣಾ ಸೌಲಭ್ಯವನ್ನು ಕಲ್ಪಿಸಲಾಗಿದೆ.

ಇ) ಜಾನುವಾರುಗಳಿಗೆ ರೋಗ ತಪಾಸಣಾ ಸೌಲಭ್ಯಗಳನ್ನು ಬೆಂಗಳೂರು ನಗರದಲ್ಲಿರುವ ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆ ಹೆಬ್ಬಾಳ, ಬೆಂಗಳೂರು ಇಲ್ಲಿಂದ ಕಲ್ಪಿಸಲಾಗಿದೆ.

ಈ) ಜಾನುವಾರುಗಳಿಗೆ ಚಿಕಿತ್ಸೆಯನ್ನು ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಉಚಿತವಾಗಿ ಪಡೆಯಬಹುದಾಗಿದೆ.

ಉ) ಚಪ್ಪೆರೋಗ, ನರಡಿರೋಗ ಗಂಟಲುಬೇನೆ, ಕಾಲುಬಾಯಿಜ್ವರ ರೇಬೀಸ್ ಕೊಕ್ಕರೆರೋಗ ಕರಳುಬೇನೆ ಮುಂತಾದ ರೋಗ ನಿರೋಧಕ ಲಸಿಕೆಗಳನ್ನು ಶುಲ್ಕ ಪಾವತಿ ಆಧಾರದ ಮೇಲೆ ನೀಡಿ ರೋಗೋದ್ರೇಕಗಳನ್ನು ತಡೆಯುವುದು.

ಊ) ಪಶುವೈದ್ಯಕೀಯ ಸೇವೆಯು ಅಲಭ್ಯವಿರುವಂತಹ ದೂರದ ಹಾಗೂ ಮೂಲೆಯ ಹಳ್ಳಿಗಳ ಜಾನುವಾರುಗಳಿಗೆ ತಾಲ್ಲೂಕಿನಲ್ಲಿನ ಸಂಚಾರಿ ಪಶುಚಿಕಿತ್ಸಾಲಯದ ಪಶುವೈದ್ಯಾಧಿಕಾರಿಗಳು ತೆರಳಿ ಸೂಕ್ತ ಚಿಕಿತ್ಸೆ ಮಾಡುವುದು.

ಋ) ತಾಲ್ಲೂಕು ಕೇಂದ್ರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪಶುವೈದ್ಯಾಧಿಕಾರಿಗಳು ವಿಸ್ತರಣಾ ಕಾರ್ಯಕ್ರಮಗಳ ಚಟುವಟಿಕೆಗಳಲ್ಲಿ ಭಾಗವಹಿಸುವುದಲ್ಲದೇ ಗ್ರಾಮೀಣ ರೈತರಿಗೆ ಪಶುಸಂಗೋಪನಾ ಕಾರ್ಯಕ್ರಮಗಳ ಅಡಿಯಲ್ಲಿ ಹೈನುಗಾರಿಕೆ, ಹಂದಿ ಸಾಕಾಣಿಕೆ ಕೋಳಿ ಸಾಕಾಣಿಕೆ ಮೊಲ ಸಾಕಾಣಿಕೆ, ಮುಂತಾದವುಗಳ ಬಗ್ಗೆ ತರಬೇತಿ ಕಾರ್ಯಕ್ರಮವನ್ನು ರೂಪಿಸುವುದು ಹಾಗೂ ಇತರೆ ವಿದ್ಯಾವಂತ ಯುವಕರಿಗೆ: ಯುವತಿಯರಿಗೆ ಈ ದಿಶೆಯಲ್ಲಿ ಶಿಕ್ಷಣ ಕೊಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

ಎ) ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ರಮಗಳ ಅಡಿಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಸಣ್ಣ ರೈತರು: ಅತಿ ಸಣ್ಣ ರೈತರು ಹಾಗೂ ವ್ಯವಸಾಯ ಕಾರ್ಮಿಕರುಗಳಿಗೆ ಸರ್ಕಾರಿ ನಿಯಮನುಸಾರ ವಿಶೇಷ ಘಟಕ ಯೋಜನೆ: ಗಿರಿಜನ ಉಪಯೋಜನೆ ಅಡಿಯಲ್ಲಿ ಹೈನುಗಾರಿಕೆ: ಕುರಿ ಸಾಕಾಣಿಕೆಗಾಗಿ ಸಹಾಯಧನ ಮಂಜೂರು ಮಾಡಿ, ಬ್ಯಾಂಕಿನಿಂದ ಸಾಲದ ಸೌಲಭ್ಯವನ್ನು ಕಲ್ಪಿಸಿ ಅವರುಗಳು ಆರ್ಥಿಕವಾಗಿ ಮುಂದುವರೆಯಲು ಸಹಕರಿಸುವುದು ಹಾಗೂ ಅನುಷ್ಠಾನಗೊಳಿಸುವುದು.

**2) ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ ಮತ್ತು ಕೃತಕ ಗರ್ಭಧಾರಣಾ ಕೇಂದ್ರಗಳು**

ಈ ಸಂಸ್ಥೆಗಳಲ್ಲಿ ಜಾನುವಾರುಗಳಿಗೆ ಸೂಕ್ತ ಚಿಕಿತ್ಸೆ ಕೃತಕ ಗರ್ಭಧಾರಣೆ (ಶುಲ್ಕ ಪಾವತಿ ಮೇಲೆ ಮತ್ತು ಜಾನುವಾರುಗಳಿಗೆ ಲಸಿಕೆಗಳನ್ನು ನೀಡಿ ರೋಗೋದ್ರೇಕಗಳನ್ನು ತಡೆಗಟ್ಟುವುದು (ಶುಲ್ಕ ಪಾವತಿಯ ಮೇಲೆ) ವಿಸ್ತರಣಾ ಕಾರ್ಯದ ಚಟುವಟಿಕೆಗಳನ್ನು ಹಮ್ಮಿಕ್ಕೊಳ್ಳುವುದು.

ಪಿ. ಆರ್. 1013

ಸಹಿ

ಉಪ ನಿರ್ದೇಶಕರು,

**OFFICE OF THE DIRECTOR DEPARTMENT OF MINES AND GEOLOGY KHANIJA BHAVAN, RACE COURSE ROAD BANGALORE-1**

**NOTIFICATION No. DMG/AML/ADV/2002-03 DATED: 26th AUGUST 2003**

It is hereby informed for the mining public that the area noted below is available for re-grant under Rule 59 of Mineral Concession Rules 1960.

Applications (preferably mining lease applications) for grant of Mineral concession over the area will be received after the expiry of thirty days (30) from the date of publication of Notification in the Karnataka State Gazette. The sketch of the area is available for inspection at the office of the Director, Department of Mines and Geology, Khanija Bhavan, Race Cource Road, Bangalore-560 001 during working hours on all working days. If the day notified for receiving the application happens to be a public holiday or General holiday, applications will be received on the next working day under amended Rules.

The mining public should note that the availability of the area published below is subject to the clearance from the Revenue Department for mining activities and compliance of the provisions of the MM (D & R) Act 1957 and the M.C. Rules 1960 and all other relevant Acts and Rules by the applicants. In case, the area is found to consists of Forest lands, the clearance from the Forest Department under Section 2 of the Forest (Conservation) Act 1980, for utilizing the area for Non Forest activities should be obtained by the applicants.

Interested person are advised to inspect the area satisfy themselves about the availability of mineral deposits (as the area is surrendered M. L. and determined M. L. and the present status of the land therein before making application for mining lease.

| Sl. No. | M. L. No/ | Mineral | Extent | Survey Nos. | Location |
|---|---|---|---|---|---|
| 1. | M.L.No. 1725 | Quartz | 10-00 Acres | 73 & 74 | Kagalgomba Village, Badami Taluk, Bagalkot district. |

Director of Mines & Geology
Bangalore.

PR-1025

**OFFICE OF THE DIRECTOR, DEPARTMENT OF MINES AND GEOLOGY KHANIJA BHAVAN, RACE COURSE ROAD BANGALORE-1**

**NOTIFICATION**

**No: DMG/DD(MA)8A/ 2002-2003 DATED: 28th AUGUST 2003**

The following area of Chikkamangalore, Tarikere, Kadur, Mudigere, N. R. Pura Taluks, Chickmangalore district belonging to the State Government are hereby notified as available for grant of quarrying leases for non-specified minor minerals after thirty (30) days from the date of publication of this notification in the official Gazette, as per Sub-Rule (1) of Rule 8A of KMMCR 1994. If the day notified for receipt of the application happens to be a public holiday or a general holiday, the application. will be accepted on the next working day.

The prescribed applications and the sketches of the notified area can be obtained from the office of the Senior Geologist, Department of Mines & Geology, Chickmangalore Office, Chickmangalore on payment of prescribed fees.

The interested general public are advised to inspect the areas and satisfy themselves about the availability of the minerals, approach road, and extent before filing their quarry lease application with the office of the Senior Geologist, Department of Mines and Geology, Chickmangalore Office, Chickmangalore district. The grant of quarry lease are subject to the clearance from the concerned authorities of the revenue Department.

**Dr. M. BASAPPA REDDY**
Director of Mines & Geology
Bangalore.

**AREA PROPOSED FOR ISSUE OF NOTIFICATIONS UNDER RULE 8A OF KMMCR 1994 IN RESPECT OF NON-SPECIFIED MINER MINERALS IN KOLAR DISTRICT**

| Sl. No. | Type of mineral | Block No. | Sy. No. | Extent in A.G | Village/ Taluk | Bounded by |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Building Stone | 125 | 185 | 1-20 | Marle/ Chickmangalore Tq | **North:** Part of Sy.No. 185<br>**South:** Part of Sy.No. 185<br>**East:** Part of Sy.No. 185<br>**West:** Part of Sy.No. 185 |
| 2. | Building Stone | 126 | 124 | 1-00 | Kadidalu/ Mudigere Tq. | **North:** Part of Sy.No. 124<br>**South:** Part of Sy.No. 124<br>**East:** Part of Sy.No. 124<br>**West:** Part of Sy.No. 124 & Some Changed area of K.K. abdud |
| 3. | Building Stone | 150 | 32 | 2-20 | Hokkunda/ Chickmagalore Tq. | **North:** Part of Sy.No. 32<br>**South:** Part of Sy.No. 32<br>**East:** Part of Sy.No. 32<br>**West:** Part of Sy.No. 32 |
| 4. | Building Stone | 201 | 46 | 1-00 | Thagadur/ Chickmagalore Tq. | **North:** Part of Sy.No. 46<br>**South:** Part of Sy.No. 46<br>**East:** Part of Sy.No. 46<br>**West:** Part of Sy.No. 46 |
| 5. | Building Stone | 199 | 26 | 1-00 | H. Thimmapura/ Tarikere Tq. | **North:** Part of Sy.No. 26<br>**South:** Part of Sy.No. 26<br>**East:** Part of Sy.No. 26<br>**West:** Part of Sy.No. 200 |
| 6. | Building Stone | 200 | 26 | 1-00 | Chikkana Halli/ Kolar | **North:** Part of Sy.No. 26<br>**South:** Part of Sy.No. 26<br>**East:** T. V. Satyanarana QL199<br>**West:** Part of Sy.No. 26 |
| 7. | Building Stone | 226 | 26 | 2-00 | H. Thimmapura/ Tarikere Tq. | **North:** Part of Sy.No. 26<br>**South:** Part of Sy.No. 26<br>**East:** Part of Sy.No. 26<br>**West:** Part of Sy.No. 26 |
| 8. | Building Stone | 233 | 26 | 4-00 | H. Thimmapura/ Tarikere Tq. | **North:** Part of Sy.No. 26<br>**South:** Part of Sy.No. 26<br>**East:** Part of Sy.No. 26<br>**West:** Part of Sy.No. 26 |
| 9. | Ordinary Soil | 118 | 49 | 1-00 | Bantaganahally/ Kadur Tq. | **North:** Part of Sy.No. 49<br>**South:** Part of Sy.No. 49<br>**East:** Part of Sy.No. 49<br>**West:** Part of Sy.No. 49 |
| 10. | Building Stone | 207 | 39 | 0-20 | Choudlapura Kadur Tq | **North:** Part of Sy.No. 39<br>**South:** Part of Sy.No. 39<br>**East:** Part of Sy.No. 39<br>**West:** Part of Sy.No. 39 |
| 11. | Building Stone | 172 | 69 | 1-00 | Nandipura/ Mudigere Tq. | **North:** Part of Sy.No. 69<br>**South:** Part of Sy.No. 69<br>**East:** Part of Sy.No. 69<br>**West:** Part of Sy.No. 69 |
| 12. | Building Stone | 180 | 314 | 0-20 | Karkeswara/ J.R. Pura Tq | **North:** Part of Sy.No. 314<br>**South:** Part of Sy.No. 314<br>**East:** Part of Sy.No. 314<br>**West:** Part of Sy.No. 314 |

**Dr. M. BASAPPA REDDY**
Director of Mines & Geology

PR- 1026

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ,**

**ನಂ.ಎಲ್ಎನ್‌ಡಿ (ಎನ್ಎ) ಸಿಆರ್:5: 03-04 ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

**ನಂ.ಎಂಐಎಸ್‌ಸಿ (ಪಿ) 4/98-99**

**ನಂ. ಎಎಲ್ಎನ್. ಎಸ್ಆರ್ (ಎನ್ಎ) 47/2000-01**

**ನಮೂನೆ - 29**

**68ನೇ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗಿನ ಘೋಷಣೆ-ನಿಯಮ 96**

ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ/384/ಎಲ್‌ಜಿಬಿ/2003, ದಿನಾಂಕ: 13.08.2003ರಲ್ಲಿ ಸೂಚಿಸಿರುವ ಪ್ರಕಾರ ಹಾಗೂ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಬೆಂಗಳೂರು ನಗರ ಜಿಲ್ಲೆ, ಜಾಲ ಹೋಬಳಿ, ಬಿಲ್ಲಮಾರನಹಳ್ಳಿ ಗ್ರಾಮದ ಸ.ನಂ.29/1ರಲ್ಲಿನ 0-04 ಗುಂಟೆ, ಸ.ನಂ.30/2ರಲ್ಲಿನ 0-06 ಗುಂಟೆ ಹಾಗೂ ಹೊಸಹಳ್ಳಿ ಗ್ರಾಮದ ಸ.ನಂ.13/1ರಲ್ಲಿನ 0-04 ಗುಂಟೆ, ಸ.ನಂ.13/2ರಲ್ಲಿನ 0-02 ಗುಂಟೆ, ಸ.ನಂ12ರಲ್ಲಿನ 0-01 ಗುಂಟೆ, ಸ.ನಂ.136/2ರಲ್ಲಿನ 0-01 ಗುಂಟೆ, ಸ.ನಂ.135/2ರಲ್ಲಿನ 0-01, ಗುಂಟೆ ಹಾಗೂ ಸ.ನಂ.10/2 ರಲ್ಲಿನ 0-01 ಗುಂಟೆ, ಒಟ್ಟು 0-20 ಗುಂಟೆ (ಸ್ಯಾಮೀಸ್ ಡ್ರೀಮ್ ಲ್ಯಾಂಡ್ ಕಂಪನಿ ಪ್ರೈವೇಟ್ ಲಿ. ವಶದಲ್ಲಿರುವ ಹಾಲಿ ಭೂ ಪರಿವರ್ತನೆ ಪಡೆದಿರುವ) ಜಮೀನುಗಳಲ್ಲಿ ಬರುವ "ಬಿ" ಖರಾಬು ಕಾಲುದಾರಿ ಎಂದು ವರ್ಗೀಕೃತಗೊಂಡ ಜಮೀನುಗಳ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಪರಿಶೀಲಿಸಿದ ತರುವಾಯ, ಸಾರ್ವಜನಿಕ ಕಾಲುದಾರಿಯ ಅಂಥ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ದಾರಿಯ ಭಾಗವು ಇರುವ ಗ್ರಾಮ | ಜಾಲ ಹೋಬಳಿ, ಬಿಲ್ಲಮಾರನಹಳ್ಳಿ ಮತ್ತು ಹೊಸಹಳ್ಳಿ ಗ್ರಾಮಗಳಲ್ಲಿನ ಕೆಳಕಂಡ ಷೆಡ್ಯೂಲ್‌ನಂತಿರುವ |
| ತಾಲ್ಲೂಕು | ಬೆಂಗಳೂರು ಉತ್ತರ ತಾಲ್ಲೂಕು (ಅಪರ) |
| ಕಾಲುದಾರಿ ಭಾಗದ ವರ್ಣನೆ | ಕೆಳಕಂಡ ಷೆಡ್ಯೂಲ್‌ನಲ್ಲಿರುವ |
| ಕಾಲುದಾರಿ ಭಾಗದ ಸರಿಸುಮಾರು ವಿಸ್ತೀರ್ಣ | ಒಟ್ಟು 0-20 ಗುಂಟೆ "ಬಿ" ಖರಾಬು |

**ಮೇರೆಗಳು (ಷೆಡ್ಯೂಲ್)**

| ಕ್ರ.ಸಂ. | ಗ್ರಾಮದ ಹೆಸರು | ಸ.ನಂ. | ವಿಸ್ತೀರ್ಣ ಎ-ಗುಂ | ಷೆಡ್ಯೂಲ್ |
|---|---|---|---|---|
| 1 | 2 | 3 | 4 | 5 |
| 1. | ಬಿಲ್ಲಮಾರನಹಳ್ಳಿ | 30/2 | 0-06 | ಪೂ: ಸನಂ.29ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನು.<br>ಪ: ಬಿಲ್ಲಮಾರನಹಳ್ಳಿ ಗ್ರಾಮದ ಗಡಿ ಸನಂ. 30/2ರ ಉಳಿಕೆ ಜಮೀನು ಹಾಗೂ ಸರ್ವೆ<br>ಉ: ನಂ. 2ರ ಬಿಲ್ಲಮಾರನಹಳ್ಳಿ ಜಮೀನುಗಳು. ಸನಂ. 30/2ರ ಉಳಿಕೆ ಜಮೀನು ಹಾಗೂ<br>ದ: ಸನಂ.31ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನುಗಳು. |
| 2. | ಬಿಲ್ಲಮಾರನಹಳ್ಳಿ | 29/1 | 0-04 | ಪೂ: ಸನಂ.13/1ರ ಹೊಸಹಳ್ಳಿ ಗ್ರಾಮದ ಜಮೀನು. ಹಾಗೂ ಹೊಸಹಳ್ಳಿ ಗ್ರಾಮದ ಗಡಿ<br>ಪ: ಸನಂ.30/2ರ ಹೊಸಹಳ್ಳಿ ಗ್ರಾಮದ ಜಮೀನು<br>ಉ: ಸನಂ.29ರ ಉಳಿಕೆ ಜಮೀನು ಹಾಗೂ 28ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನುಗಳು.<br>ದ: ಸನಂ.29ರ ಉಳಿಕೆ ಜಮೀನು ಮತ್ತು 31ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನುಗಳು. |
| 3. | ಹೊಸಹಳ್ಳಿ | 13/1 | 0-04 | ಪೂ: ಸ.ನಂ.13/1ರ ಉಳಿಕೆ ಜಮೀನು ಮತ್ತು 14ರ ಹೊಸಹಳ್ಳಿ ಗ್ರಾಮದ ಜಮೀನುಗಳು<br>ಪ: ಸನಂ.29/1ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನು<br>ಉ: ಸನಂ.28ರ ಬಿಲ್ಲಮಾರನಹಳ್ಳಿ ಗ್ರಾಮದ ಮತ್ತು ಸನಂ.15ರ ಹೊಸಹಳ್ಳಿ ಗ್ರಾಮದ ಜಮೀನುಗಳು.<br>ದ: ಸನಂ.13/2 ಹೊಸಹಳ್ಳಿ ಗ್ರಾಮದ ಜಮೀನು. |

| 1 | 2 | 3 | 4 | 5 |
|---|---|---|---|---|
| 4. | ಹೊಸಹಳ್ಳಿ | 13/2 | 0-02 | ಪೂ: ಸ.ನಂ.13/2ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು ಹಾಗೂ ಸ.ನಂ.12ರ ಹೊಸಹಳ್ಳಿ ಗ್ರಾಮದ ಜಮೀನುಗಳು<br>ಪ: ಸನಂ.13/1ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು ಹಾಗೂ ಸನಂ. 29 ಮತ್ತು 31ರ ಬಿಲ್ಲಮಾರನಹಳ್ಳಿ ಗ್ರಾಮದ ಜಮೀನುಗಳು.<br>ಉ: ಸನಂ.13/1ರ ಹೊಸಹಳ್ಳಿ ಗ್ರಾಮದ ಜಮೀನು.<br>ದ: ಸನಂ.12 ಮತ್ತು 13ರ ಹೊಸಹಳ್ಳಿ ಗ್ರಾಮದ ಜಮೀನುಗಳು. |
| 5. | ಹೊಸಹಳ್ಳಿ | 12 | 0-01 | ಪೂ: ಸನಂ.12ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು.<br>ಪ: ಸನಂ. 13/2ರ ಹೊಸಹಳ್ಳಿ ಗ್ರಾಮದ ಜಮೀನು.<br>ಉ: ಸನಂ.12ರ ಉಳಿಕೆ ಜಮೀನು ಹಾಗೂ 14ರ ಹೊಸಹಳ್ಳಿ ಗ್ರಾಮದ ಜಮೀನುಗಳು.<br>ದ: ಸನಂ.136ರ ಹೊಸಹಳ್ಳಿ ಗ್ರಾಮದ ಜಮೀನು |
| 6. | ಹೊಸಹಳ್ಳಿ | 136/2 | 0-01 | ಪೂ: ಸನಂ.135/2ರ ಹೊಸಹಳ್ಳಿ ಗ್ರಾಮದ ಜಮೀನು.<br>ಪ: ಸನಂ.136/2ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು<br>ಉ: ಸನಂ.12ರ ಹೊಸಹಳ್ಳಿ ಗ್ರಾಮದ ಜಮೀನು.<br>ದ: ಸನಂ.136/2ರ ಉಳಿಕೆ ಜಮೀನು ಹಾಗೂ ಸನಂ.135/2ರ ಹೊಸಹಳ್ಳಿ ಗ್ರಾಮದ ಜಮೀನುಗಳು. |
| 7. | ಹೊಸಹಳ್ಳಿ | 135/2 | 0-01 | ಪೂ: ಸನಂ.10/2ರ ಹೊಸಹಳ್ಳಿ ಗ್ರಾಮದ ಜಮೀನು. ಸನಂ. 136/2ರ ಹೊಸಹಳ್ಳಿ ಗ್ರಾಮದ ಜಮೀನು<br>ಪ: ಸನಂ.135/2ರ ಉಳಿಕೆ ಜಮೀನು ಹಾಗೂ<br>ಉ: ಸನಂ.12ರ ಹೊಸಹಳ್ಳಿ ಗ್ರಾಮದ ಜಮೀನುಗಳು. ಸನಂ.10/2ರ ಉಳಿಕೆ ಜಮೀನು ಹಾಗೂ<br>ದ: ಸನಂ.140ರ ಹೊಸಹಳ್ಳಿ ಗ್ರಾಮದ ಜಮೀನುಗಳು. |
| 8. | ಹೊಸಹಳ್ಳಿ | 10/2 | 0-01 | ಪೂ: ಸನಂ.10/2ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು.<br>ಪ: ಸನಂ.135/2ರ ಹೊಸಹಳ್ಳಿ ಗ್ರಾಮದ ಜಮೀನು.<br>ಉ: ಸನಂ.10/2ರ ಹೊಸಹಳ್ಳಿ ಗ್ರಾಮದ ಉಳಿಕೆ ಜಮೀನು<br>ದ: ಸನಂ.10/2ರ ಉಳಿಕೆ ಜಮೀನು ಹಾಗೂ ಸನಂ.140ರ ಹೊಸಹಳ್ಳಿ ಗ್ರಾಮದ ಜಮೀನುಗಳು. |
| | ಒಟ್ಟು | | **0-20** | |

ಪಿ.ಆರ್.1016 ವಿಶೇಷ ಜಿಲ್ಲಾಧಿಕಾರಿಗಳು, (ಕಂ) ಬೆಂಗಳೂರು ಜಿಲ್ಲೆ, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ತಿದ್ದುಪಡಿ ಪ್ರಕಟಣೆ ಸಂಖ್ಯೆ: ಬಿ1:71ಎ:ಆರ್‌ಪಿಟಿ:69:01-02 ದಿನಾಂಕ: 27ನೇ ಆಗಸ್ಟ್ 2003**

**ವಿಷಯ :** ರಿಪ್ಪನ್ ಪೇಟೆ ವಲಯದಲ್ಲಿ ದಾಖಲಾದ ಅರಣ್ಯ ಮೊಕದ್ದಮೆ ಸಂಖ್ಯೆ: 69/ 01-02 ರಲ್ಲಿ ಅಮಾನತ್ತುಪಡಿಸಿದ ಟಾಟಾ ಸುಮೋಜೀಪ್ ನಂ. ಕೆ.ಎ. 03-ಎನ್-2165 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಬಗ್ಗೆ.

**ಉಲ್ಲೇಖ :** ದಿನಾಂಕ: 20.02.03 ರ ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 273 ಮತ್ತು 274 ರಲ್ಲಿ ಪ್ರಕಟಗೊಂಡ ಈ ಕಛೇರಿ ಪ್ರಕಟಣೆ ಸಂಖ್ಯೆ ಬಿ1-71ಎ-ಸಿ.ಆರ್-1/02-03 ದಿನಾಂಕ: 24.01.2003.

ಈ ವಿಭಾಗದ ರಿಪ್ಪನ್ ಪೇಟೆ ವಲಯದಲ್ಲಿ ದಿನಾಂಕ: 28.8.01 ರಂದು ದಾಖಲಾದ ಅರಣ್ಯ ಮೊಕದ್ದಮೆ ಸಂಖ್ಯೆ 69/01-02 ರಲ್ಲಿ ಅಮಾನತ್ತುಗೊಳಿಸಲಾದ ಟಾಟಾ ಸುಮೋ ಜೀಪ್ ನಂ ಕೆ.ಎ-03-ಎನ್-2165ನ್ನು ಉಲ್ಲೇಖದ ಪ್ರಕಟಣೆಯಲ್ಲಿ ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು.

ಈ ಪ್ರಕಟಣೆಯಲ್ಲಿ ಸದರಿ ವಾಹನದ ಚಾಸಿ ನಂ. 385003-ಡಿಯುಕ್ಯೂ-907282 ಎಂದು ಮಾತ್ರ ನಮೂದಾಗಿದ್ದು ಇಂಜಿನ್ ನಂಬರನ್ನು ನಮೂದಿಸಿರುವುದಿಲ್ಲ. ಈ ಟಾಟಾ ಸುಮೋ ಜೀಪ್ ನಂ. ಕೆಎ-03-ಎನ್-2165 ರ ಇಂಜಿನ್ ನಂ. 729961 ಆಗಿದೆ ಎಂದು ಓದಿಕೊಳ್ಳಬೇಕಾಗಿ ಈ ತಿದ್ದುಪಡಿ ಪ್ರಕಟಣೆ ಮೂಲಕ ತಿಳಿಸಲಾಗಿದೆ.

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್.1020 ಶಿವಮೊಗ್ಗ ವಿಭಾಗ, ಶಿವಮೊಗ್ಗ.